ಬೆಲೆ: ಎರಡು ಆಣೆ

ವರ್ಗಣಿ ದರ
(ಅಂಚೆವೆಚ್ಚ ಸೇರಿ)
ವರ್ಷಕ್ಕೆ ರೂ. ೬-೪-೦
೬ ತಿಂಗಳಿಗೆ ,, ೩-೪-೦
೩ ತಿಂಗಳಿಗೆ ,, ೧-೧೨-೦
ವ್ಹಿ. ಪಿ. ಮೂಲಕ ತರಿಸಿಕೊಂಡಲ್ಲಿ ೫ ಆಣೆ ಹೆಚ್ಚಿಗೆ ಬೀಳುವದು.

# ಕರ್ಮವೀರ

KARMAVEER
WEEKLY
HUBLI
AUG. 19
1946

ಸಂಪಾದಕರು : ಹ. ರಾ. ಪುರೋಹಿತ, ಎಂ. ಎ. ] ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ [ Editor : H. R. Purohit, M. A.

ಸಂಪುಟ ೧೮ ] ಹುಬ್ಬಳ್ಳಿ ಸೋಮವಾರ ತಾರೀಖು ೧೯—೮—೧೯೪೬ [ ಸಂಚಿಕೆ ೨೦


# ಮುಸ್ಲಿಂ ಲೀಗು ಪ್ರತ್ಯಕ್ಷ ಹೋರಾಟ ಹೂಡಿದರೆ—

## ತನ್ನ ಕಾಲಿಗೆ ತಾನೇ ಕಲ್ಲು ಹಾಕಿಕೊಂಡಂತಾದೀತು — ೧೯೩೦ ರಲ್ಲಿನ ಕಾಂಗ್ರೆಸ್ ನಿಲುಮೆಗೂ ೧೯೪೬ರ ಲೀಗ್ ನಿಲುಮೆಗೂ ಇರುವ ಅಂತರ

ಶ್ರೀ. ಕೆ. ಸಂತಾನಂ ಅವರಿಂದ

ಬ್ರಿಟಿಶ ಮಂತ್ರಿ ರಾಯಭಾರದ ದೀರ್ಘಾವಧಿ ಹಾಗು ನಡುಗಾಲ ಯೋಜನೆಗಳನ್ನು ಅಂಗೀಕರಿಸಿದ್ದ ಮುಸ್ಲಿಂ ಲೀಗು ಈಗ ತನ್ನ ನಿರ್ಣಯವನ್ನು ಉಪಸಂಹರಿಸಿ ಪ್ರತ್ಯಕ್ಷ ಕ್ರಿಯೆ ಅಥವಾ ಹೋರಾಟವನ್ನು ಕೈಕೊಳ್ಳಲು ನಿರ್ಧರಿಸಿ ಗಂಭೀರವಾದ ಉಪಕ್ರಮವನ್ನು ಕೈಕೊಂಡಿದೆ. ಈ ಉಪಕ್ರಮದ ಪರಿಣಾಮವನ್ನು ಊಹಿಸುವದು ಅಸಾಧ್ಯವೇ ಸರಿ. ಈ ನಿರ್ಣಯವನ್ನು ತಿರಸ್ಕಾರಬುದ್ಧಿಯಿಂದ ನೋಡುವದಾಗಲಿ ಲೀಗ್ ಮುಂದಾಳುಗಳಿಗೆ ಹೋರಾಟದ ಅನುಭವವಿಲ್ಲ, ಅದರ ಸ್ಪಷ್ಟವಾದ ಕಲ್ಪನೆ ಕೂಡ ಅವರಲ್ಲಿರಲಿಲ್ಲ, ಎಂದು ವಾದಿಸಿ ಏನೂ ಸಂಭವಿಸುವದಿಲ್ಲ ಅಥವಾ ಸಂಭವಿಸಲಾರದು ಎಂದು ನಿರ್ಣಯಿಸಿಕೊಳ್ಳುವದಾಗಲಿ ಸರಿಯಲ್ಲ. ಧರ್ಮಾಂಧತೆ ಮುಸುಕಿರುವಲ್ಲಿ ಅಜ್ಞಾನ ಪ್ರಬಲ ಸಾರಥಿಯಾಗುತ್ತದೆ. ಮನುಷ್ಯನಲ್ಲಿ ಸಂಯಮವನ್ನು ಹುಟ್ಟಿಸುವದು ತಿಳುವಳಿಕೆ. ಆದರೆ ಮುಸ್ಲಿಂ ಲೀಗು ತನ್ನ ದಿಕ್ಕನ್ನು ಬದಲಿಸಿದ ಮಾತ್ರಕ್ಕೆ ಗಾಬ್ಬರಿಯಾಗುವ ಕಾರಣವೂ ಇಲ್ಲ. ಭಯದಿಂದಲೋ ರೋಷದಿಂದಲೋ ಯಾವುದೊಂದು ಅವಸರದ ನಿರ್ಣಯಕ್ಕೆ ಧುಮುಕುವಷ್ಟು ದುರ್ಬಲಚಿತ್ತವನ್ನು ರಾಷ್ಟ್ರ ಪ್ರದರ್ಶಿಸಬಾರದು. ಶಾಂತಚಿತ್ತದಿಂದ, ಧೈರ್ಯ ಸಮಾಧಾನಗಳಿಂದ ಎದುರಿಸಬೇಕಾದ ಪರಿಸ್ಥಿತಿ ಇದು.

### ಅಸಮರ್ಪಕ ಹೋಲಿಕೆ

೧೯೩೦ ರಲ್ಲಿ ಕಾಂಗ್ರೆಸ್ಸು ಯಾವ ಅವಸ್ಥೆಯಲ್ಲಿ ಪ್ರವೇಶಿಸಿತ್ತೊ ಆ ಅವಸ್ಥೆಯಲ್ಲಿ ಇಂದು ಲೀಗು ಪ್ರವೇಶಿಸಿದೆಯೆಂದೂ ಆ ಇತಿಹಾಸ ಪ್ರಸಿದ್ಧ ವರ್ಷದಲ್ಲಿ ಕಾಂಗ್ರೆಸ್ಸು ಯೋಜಿಸಿದ ಕ್ರಿಯಾಯೋಜನೆಯನ್ನು ಅನುಸರಿಸಿಯೇ ಲೀಗು ಇಂದು ತನ್ನ ಯೋಜನೆಯನ್ನು ರೂಪಿಸಿದೆಯೆಂದೂ ಹೇಳುವವರಿದ್ದಾರೆ. ಆದರೆ ಈ ಹೋಲಿಕೆ ತೀರ ಅಸಮಂಜಸವಾದುದು. ಕಾಂಗ್ರೆಸ್ಸು ೧೯೩೦ ರಲ್ಲಿದ್ದ ಪರಿಸ್ಥಿತಿಗೂ ೧೯೪೬ ರಲ್ಲಿ ಮುಸ್ಲಿಂ ಲೀಗು ಅರಿಸಿದ ನಿಲುಮೆಗೂ ಮೂರು ಮುಖ್ಯ ಭೇದಗಳಿವೆ. ಆಗ ಸಾಮಂತ ಸ್ವರಾಜ್ಯವನ್ನು ಒಳಗೊಂಡಿದ್ದ ಕಾಂಗ್ರೆಸ್ಸಿನ ಅಂದಿನ ಬೇಡಿಕೆ ಆ ಕ್ಷಣದಲ್ಲಿ ಎಷ್ಟು ದುಸ್ಸಾಧ್ಯವೆಂದು ಕಾಣಿಸಿರಬಹುದಾದರೂ ನ್ಯಾಯವೂ ಸಾಧ್ಯವೂ ಆದ ಬೇಡಿಕೆಯಾಗಿತ್ತು. ಈ ಗುರಿಯ ಔಚಿತ್ಯವನ್ನು ಬ್ರಿಟಿಶ ಸರಕಾರ ಕೂಡ ಎಂದೂ ಪ್ರತಿವಾದಿಸಿದ್ದಿಲ್ಲ. ಅದು ಹೇಳುತ್ತಿದ್ದುದಿಷ್ಟೆ: ಕಾಂಗ್ರೆಸ್ಸು ಅವಸರಪಡಬಾರದು; ಸಾವಧಾನವಾಗಿ ಸ್ವರಾಜ್ಯ ವಿಕಾಸಗೊಳ್ಳುವ ವರೆಗೆ ಅದು ಕಾಯಬೇಕು; ಇದಕ್ಕೆ ಪಾರ್ಲಮೆಂಟಿನ ಒಪ್ಪಿಗೆ ಇದೆ. ಇಂದು ಮುಸ್ಲಿಂ ಲೀಗಿನ ಸ್ಥಿತಿ ಹಾಗಿಲ್ಲ. ಮುಸ್ಲಿಮೇತರ ಆಸಾಮು ಮತ್ತು ಬಂಗಾಲ ಪಂಜಾಬಗಳಲ್ಲಿರುವ ವಿಸ್ತಾರವಾದ ಮುಸ್ಲಿಮೇತರ ಖಂಡಗಳನ್ನು ಒಳಗೊಂಡ ಪಾಕಿಸ್ತಾನವನ್ನು ಅದು ಬೇಡುತ್ತಿರುವದು ಎಷ್ಟು ಅನ್ಯಾಯವೋ ಅಷ್ಟೇ ಅವ್ಯವಹಾರ್ಯವೂ ಆಗಿದೆ. ಮುಸ್ಲಿಂ ಲೀಗಿನ ಮಸುಕಾದ ಬೇಡಿಕೆಯನ್ನು ಸ್ಫುಟವಾದ ಸೂತ್ರರೂಪಕ್ಕೆ ಇಳಿಸಿದ ಶ್ರೇಯಸ್ಸು ಹಿಂದುವಾದ ಶ್ರೀ ರಾಜಗೋಪಾಲಾಚಾರಿಯವರಿಗೆ ಸಲ್ಲುತ್ತದೆ. ಆ ಸೂತ್ರವನ್ನು ಜಿನ್ನಾರು ತಿರಸ್ಕರಿಸಿಬಿಟ್ಟಾಗಲೆ ಅವರು ತಮ್ಮ ಬೇಡಿಕೆಯಲ್ಲಿದ್ದ ಅಲ್ಪ ಸ್ವಲ್ಪ ಔಚಿತ್ಯವನ್ನೂ ಅಳಿಸಿದರು. ಆಗಲೆ ಅದು ಬರಿ ಬೆದರುಗುಂಡಾಗಿ ಮಾರ್ಪಟ್ಟಿತು ಮತ್ತು ಬ್ರಿಟಿಶ ಸರಕಾರದೊಡನೆಯೂ ಕಾಂಗ್ರೆಸಿನೊಡನೆಯೂ ಚರ್ಚೆ ಮಾಡಿ ಹಿಂದೀ ಮುಸ್ಲಿಮರಿಗೆ ಅಖಂಡ ಭಾರತದಲ್ಲಿ ಪರಮಾವಧಿ ಸೌಲಭ್ಯಗಳನ್ನು ದೊರಕಿಸಿಕೊಳ್ಳುವ ಒಂದು ಸಾಧನ ಮಾತ್ರವಾಗಿಬಿಟ್ಟಿತು. ರಾಜಾಜಿ ಯೋಜನೆಯನ್ನು ಸಂಬಂಧಪಟ್ಟ ಎಲ್ಲರೂ—ಬ್ರಿಟಿಶ ಸರಕಾರವನ್ನೊಳಗೊಂಡು—ತಿರಸ್ಕರಿಸಿದ್ದಾರೆ. ಅದರೊಡನೆ ಪಾಕಿಸ್ತಾನವೂ ತಿರಸ್ಕೃತವಾಯಿತು. ಸರದಾರ ವಲ್ಲಭಭಾಯಿಯವರು ಮೊನೆ ಮಾತಿನಲ್ಲಿ ಹೇಳಿರುವಂತೆ, "ಈ ಹಳೆಯ ಯೋಜನೆಯನ್ನು ಪುನರುಜ್ಜೀವಿಸುವದು, ಸತ್ತ ಹಾವನ್ನು ಸುತ್ತಿಸುತ್ತಿ ಹೊಡೆದಂತೆ ಅರ್ಥರಹಿತ ಕೃತಿ. ಘಟನಾ ಸಮಿತಿಯ ಗತಿ ಏನೇ ಆಗಲಿ ಅಖಂಡ ಭಾರತದ ಒಗ್ಗಟ್ಟನ್ನು ಸ್ಥಾಪಿಸುವದು ಹಿಂದುಸ್ತಾನದ ಅಪರಿವರ್ತನೀಯ ಧ್ಯೇಯವಾಗಿ ಪುನಃ ಪ್ರಸ್ಥಾಪಿಸಲ್ಪಟ್ಟಂತಾಗಿದೆ. ಇದನ್ನು ಶಾಂತ ಮಾತುಕತೆಯಿಂದ ಬದಲಿಸುವದು ಸಾಧ್ಯವಿಲ್ಲ. ಬಲಾತ್ಕಾರದಿಂದ ಯಾವುದೊಂದು ವ್ಯವಸ್ಥೆಯನ್ನು ಹೊರಿಸಲು ಪ್ರಯತ್ನಿಸಿದರೆ ಬಂಗಾಲದಲ್ಲಿಯೂ ಪಂಜಾಬದಲ್ಲಿಯೂ ಇರುವ ಮುಸ್ಲಿಮೇತರ ಜನತೆಯ ಪ್ರಬಲ ವಿರೋಧದ ಕಾರಣದಿಂದ ಅದು ವಿಫಲವಾಗುವದು ನಿಶ್ಚಯ.

೧೯೩೦ ರಲ್ಲಿನ ಕಾಂಗ್ರೆಸ ಮತ್ತು ೧೯೪೬ ರ ಲೀಗು ಇವುಗಳಲ್ಲಿ ಇನ್ನೊಂದು ಮಹತ್ತರವಾದ ಭೇದವುಂಟು. ಕಾಂಗ್ರೆಸ್ಸಿನ ಪ್ರತ್ಯಕ್ಷ ಹೋರಾಟದ ಯೋಜನೆಯಲ್ಲಿ ನಿಷ್ಠುರವಾದ ಅಹಿಂಸಾಮಾರ್ಗ ವಿಧಿಸಲ್ಪಟ್ಟಿತ್ತು. ೧೯೩೦ ರಿಂದೀಚೆಗೆ ಹೂಡಲಾದ ಅನೇಕ ಸ್ವಾತಂತ್ರ್ಯ ಆಂದೋಲನಗಳಲ್ಲಿ ಅಲ್ಲೊಂದು ಇಲ್ಲೊಂದು ಹಿಂಸಾತ್ಮಕ ಕೃತ್ಯವಾಗಿದ್ದಿರಬಹುದಾದರೂ ಒಟ್ಟಿನ ಮೇಲೆ ಅವುಗಳು ಅಹಿಂಸಾತ್ಮಕವಾಗಿಯೇ ಉಳಿದುದು ಗಮನಾರ್ಹವಾಗಿದೆ. ಈ ಅಹಿಂಸಾ ವಿಧಿಯಿಂದ ಸ್ವಾತಂತ್ರ್ಯದ ಹೋರಾಟಕ್ಕೆ ಅಡ್ಡಗಾಲು ಬಿತ್ತು ಹೊರತು ಅದರಿಂದ ಸಾಧಕವೇನೂ ಆಗಲಿಲ್ಲವೆಂದು ವಾದಿಸಬಹುದು. ಈ ವಿವಾದವನ್ನು ಬರಿ ತರ್ಕದಿಂದಲೇ ಬಗೆಹರಿಸುವದು ಸಾಧ್ಯವಿಲ್ಲ. ಏಕೆಂದರೆ ನಾವು ಮಾಡುವ ಸಿದ್ಧಾಂತ ನಾವು ಆಧಾರವಾಗಿಟ್ಟುಕೊಂಡ ಮೂಲ ಪ್ರಮಾಣಗಳನ್ನೆ ಅವಲಂಬಿಸುತ್ತದೆ. ೧೯೩೦ ರಲ್ಲಿ ಕಾಂಗ್ರೆಸ್ಸು ಹಿಂಸಾತ್ಮಕ ಕ್ರಾಂತಿಯನ್ನು ಪ್ರಾರಂಭಿಸಲುದ್ಯೋಗಿಸಿದ್ದರೆ ಅದು ಮೊದಲಲ್ಲಿಯೇ ನುಚ್ಚುನೂರಾಗಿ ಹೋಗುತ್ತಿತ್ತು ಎಂದು ನನ್ನ ನಿರ್ದಿಷ್ಟ ಅಭಿಪ್ರಾಯ. ಅದರಿಂದ ಅಲ್ಲಲ್ಲಿ ಪ್ರಬಲವಾದ ದುರ್ದಮ್ಯವಾದ ಸ್ಥಳೀಯ ಕ್ರಾಂತಿಕಾರಿ ಗುಂಪುಗಳು ಹುಟ್ಟಿಕೊಳ್ಳಲು ಅವಕಾಶ ದೊರೆಯಬಹುದಾಗಿತ್ತು. ಆದರೆ ರಾಷ್ಟ್ರೀಯ ಆಂದೋಲನದ ಏಕ ಮುಖತೆ ಮತ್ತು ಏಕಕೇಂದ್ರತೆ ನಷ್ಟವಾಗಿ ಬಿಡುತ್ತಿತ್ತು. ಅಹಿಂಸಾ ನಿಯಮದ ನಿಷ್ಠುರ ಇತಿಮಿತಿಯನ್ನು ಹಾಕಿಕೊಳ್ಳದೆ ಪ್ರತ್ಯಕ್ಷ ಹೋರಾಟಕ್ಕಿಳಿದು ಮುಸ್ಲಿಂ ಲೀಗು ತನ್ನ ಅಸ್ತಿತ್ವಕ್ಕೇ ಗಂಡಾಂತರ ತಂದುಕೊಳ್ಳಹೊರಟಿದೆ.

ಮೂರನೆಯ ಭೇದವಂತೂ ಮುಂದಾಳಿಗೆ ಸಂಬಂಧಿಸಿದ್ದು. ಪ್ರತ್ಯಕ್ಷ ಹೋರಾಟದಲ್ಲಿ ಮುಂದಾಳ್ತನ ವಹಿಸಲು ಮಹಾತ್ಮಾ ಗಾಂಧಿಯವರಿಗೂ ಜಿನ್ನಾ ಸಾಹೇಬರಿಗೂ ಇರುವ ಯೋಗ್ಯತೆಗಳನ್ನು ಹೋಲಿಸುತ್ತ ಹೋಗುವ ಸೋಹಾರಿತನವನ್ನು ನಾನು ಮಾಡುವದಿಲ್ಲ. ಜನಸಾಮಾನ್ಯದಲ್ಲಿ ಹುರುಪನ್ನೂ ಕಲಿತನವನ್ನೂ ಸಂಚಿತಗೊಳಿಸುವ ಗಾಂಧೀಜಿಯ ಶಕ್ತಿಯನ್ನು ಬಣ್ಣಿಸಬೇಕಾಗಿಲ್ಲ. ಆದರೆ ಅವರು ತಮ್ಮ ಅದಮ್ಯ ಇಚ್ಛಾಶಕ್ತಿಯನ್ನು ಜನರಲ್ಲಿ ಬಲಿದಾನಬುದ್ಧಿಯನ್ನು ಹುಟ್ಟಿಸಲೆಷ್ಟೋ ಅಷ್ಟೇ ಸಲ ಅವರನ್ನು ಅತಿರೇಕಕ್ಕಿಳಿಯದಂತೆ ತಡೆಯಲಿಕ್ಕೂ ಉಪಯೋಗಿಸಿದ್ದಾರೆ. ಜಿನ್ನಾ ಸಾಹೇಬರು ತಮ್ಮ ಅನುಯಾಯಿಗಳನ್ನು ಹಿಡಿತದಲ್ಲಿಟ್ಟುಕೊಳ್ಳಲು ಸಮರ್ಥರಾಗುವರೋ ಎಂಬದು ಸಂಶಯಾಸ್ಪದವಾಗಿದೆ. ಆಳವಾಗಿ ಬೇರೂರಿದ ವಿಶ್ವಾಸವನ್ನು ಅವಲಂಬಿಸಿದ ಸಾಮಾನ್ಯ ಇತಿಮಿತಿಗಳ ಅಭಾವವಿರುವಾಗ ಪ್ರತ್ಯಕ್ಷ ಹೋರಾಟವೆಂಬ ಶಬ್ದ ಬಹಳ ಸಂದಿಗ್ಧವಾದುದು. ಅದು ಅಹಿಂಸಾತ್ಮಕವಾಗಿದ್ದರೆ, ಸಭೆ, ಹರತಾಳ, ವೈಯಕ್ತಿಕ ಶಾಸನಭಂಗಗಳಿಂದಾರಂಭಿಸಿ ಸಾಮೂಹಿಕ ಸತ್ಯಾಗ್ರಹ, ಕರಬಿರಾಕರಣೆಗಳ ವರೆಗೂ ವಿಸ್ತರಿಸಬಲ್ಲದು; ಹಿಂಸಾತ್ಮಕವಾಗಿದ್ದರೆ ಅದು ವಿಘಾತಕ ಚಟುವಟಿಕೆ, ಅಲ್ಲಲ್ಲಿ ಭಯೋತ್ಪಾದನ ಅಥವಾ ಸಂಘಟಿತ ಕೊಲೆಗಳ ರೂಪವನ್ನು ಧರಿಸಬಹುದು. ಈ ವಿವಿಧ ರೂಪದ ಪ್ರತ್ಯಕ್ಷ ಹೋರಾಟಗಳಲ್ಲಿ ಯಾವುದೊಂದನ್ನಾದರೂ ತಮ್ಮ ಕಾರ್ಯಕ್ಕೆ ಬಳಸಿಕೊಳ್ಳಲು ಅವಕಾಶವಿದೆಯೇ ಎಂದು ಲೀಗ ಮುಂದಾಳುಗಳು ಸಮಾಧಾನದಿಂದ ವಿಚಾರ ವಿಚಾರ ಮಾಡುವರೆಂದು ಹಾರೈಸಬೇಕಾಗಿದೆ.

### ಅಹಿಂಸಾತ್ಮಕ ಕ್ರಿಯೆ

ಅಹಿಂಸಾತ್ಮಕ ಪ್ರತ್ಯಕ್ಷ ಕ್ರಿಯೆಯ ಸಾಧ್ಯಾಸಾಧ್ಯತೆಯನ್ನು ಚಿಂತಿಸೋಣ. ಮುಸ್ಲಿಮರು ಅಲ್ಪಸಂಖ್ಯಾಕರಾಗಿರುವ ಪ್ರಾಂತಗಳಲ್ಲಿ, ಹಿಂದುಸ್ತಾನದ ಬೇರಾವುವೋ ಕೆಲವು ಭಾಗಗಳನ್ನು ಕಂಡರಿಸಿ ಪ್ರತ್ಯೇಕ ರಾಜ್ಯವೊಂದನ್ನು ನಿರ್ಮಿಸಲಿಲ್ಲವೆಂದು ಹೇಳಿ ಅವರು ಕಾಯಿದೆ ಮುರಿದು ಸೆರೆಮನೆಗೆ ಹೋದರೆ ಅವರನ್ನು ಮರುಳರೆಂದು ಕರೆದಾರು. ಪಾಲಿಸ್ತಾನದಲ್ಲಿ ಯಹೂದ್ಯ ರಾಜ್ಯವನ್ನು ಸ್ಥಾಪಿಸಬೇಕೆಂಬ ಉದ್ದೇಶದಿಂದ ಇಂಗ್ಲಂಡ್ ಅಮೇರಿಕೆಗಳಲ್ಲಿರುವ ಯಹೂದ್ಯರು ತಮ್ಮ ದೇಶಗಳಲ್ಲಿ ಪ್ರತ್ಯಕ್ಷ ಹೋರಾಟ ಹೂಡಿದರೆ ಎಷ್ಟು ನಗೆಗೀಡಾಗುವರೋ ಅಷ್ಟೇ ಇವರೂ ಆಗುವರು. ಸ್ವರಾಜ್ಯವನ್ನು ಅನುಭವಿಸುವ ಯಾವುದೇ ರಾಜ್ಯದಲ್ಲಿರುವ ಅಲ್ಪಸಂಖ್ಯಾಕರು ತಮ್ಮ ಮೇಲೆ ದಬ್ಬಾಳಿಕೆಯಾದರೆ ಅಥವಾ ತಾವು ಅಮೂಲ್ಯವೆಂದೆಣಿಸುವ ಹಕ್ಕುಬಾಧ್ಯತೆಗಳನ್ನು ಕಸಿದುಕೊಂಡರೆ ಮಾತ್ರ ಪ್ರತ್ಯಕ್ಷ ಅಹಿಂಸಾತ್ಮಕ ಹೋರಾಟವನ್ನು ಹೂಡಬಹುದು. ಮುಸ್ಲಿಮರು ಬಹುಸಂಖ್ಯಾಕರಾಗಿರುವ ಪ್ರಾಂತಗಳಲ್ಲಿ ಪ್ರತ್ಯಕ್ಷ ಹೋರಾಟವನ್ನು ಹೂಡಿದರೆ ಅಲ್ಲಿರುವ ಲೀಗ್ ಮಂತ್ರಿಮಂಡಲಗಳ ಹೊರಪಯಣಕ್ಕೂ ಪ್ರಬಲ ಬ್ರಿಟಿಶ ಅಧಿಕಾರರೊಡನೆ ಮುಸ್ಲಿಮರ ವಿರುದ್ಧ ಇತರ ಜಾತಿ ಪಂಥಗಳ ಜನರ ಸಹಯೋಗಕ್ಕೂ ಅವಕಾಶವನ್ನು ಕಲ್ಪಿಸಿಕೊಟ್ಟಂತಾಗುವದು. ಈ ಇತರರ ಸಂಖ್ಯೆ ಬಂಗಾಲ ಪಂಜಾಬಗಳಲ್ಲಿ ಅರ್ಧಕ್ಕರ್ಧದಷ್ಟಿರುವದರಿಂದ ಇದರ ಪರಿಣಾಮವಾಗಿ ಆಡಳಿತ ದಿನ ದಿನಕ್ಕೆ ಕೆಡುತ್ತ ಹೋಗಿ ವಿಶಾಲ ಜನಸಮುದಾಯಕ್ಕೆ ಅತ್ಯಂತ ಕ್ಲೇಶವೊದಗುವದು. ಅದನ್ನನುಭವಿಸುವದರಲ್ಲಿ ಮುಸ್ಲಿಮರೇ ಬಹುಸಂಖ್ಯಾಕರಾಗುವರು.

ಲೀಗು ಹಿಂಸೆಗೆ ಕೈಹಾಕಿದರೆ ಮುಖ್ಯವಾಗಿ ದೊಡ್ಡ ನಗರಗಳಲ್ಲಿ ಬಹಳ ರಕ್ತಪಾತವಾಗುವದೆಂಬಲ್ಲಿ ಸಂದೇಹವಿಲ್ಲ. ಅವರೆ ಈ ನಡುವೆ ಲೀಗಿನ ಸಂಘಟನೆ ಛಿನ್ನವಿಚ್ಛಿನ್ನವಾಗಿ ಮುಸ್ಲಿಂ ಜನತೆಯೇ ತಲೆತಿರುಕರ ಗುಂಪೊಂದು ಕಡೆ ಉಳಿದ ಶಾಂತಿಪ್ರಿಯ ಜನಸಮೂಹವೊಂದೆಡೆಯೆಂದು ಇಬ್ಬಣವಾಗಿ ಒಡೆದು ಹೋಗುವದು. ಮೊದಲೇ ತೋರಿಸಿಕೊಟ್ಟಿರುವಂತೆ ಲೀಗಿನ ಗುರಿಯೇ ವಾಯವ್ಯ ಮತ್ತು ಬಂಗಾಲದ ಕೆಲಭಾಗಗಳಲ್ಲಿ ಹೊರತು ಸರ್ವಥಾ ಅಸಾಧನೀಯವಾಗಿರುವದರಿಂದ ಹೋರಾಟದ ಕೊನೆಗೆ ಮುಸ್ಲಿಮರು ತಾವು ಮೊದಲಿದ್ದಲ್ಲಿಗಿಂತ ಒಂದು ಹೆಜ್ಜೆಯೂ ಮುಂದುವರಿದಿಲ್ಲವೆಂದು ದುಃಖದಿಂದ ಕಂಡುಕೊಳ್ಳಬೇಕಾದೀತು.

### ಉಪಾಯಗಳು

ಬ್ರಿಟಿಶ ಸರಕಾರವನ್ನೂ ಹಿಂದುಸ್ತಾನದ ಮುಸ್ಲಿಮೇತರ ಜನರನ್ನೂ ಎದುರಿಸಿರುವ ಸಮಸ್ಯೆಯೆಂದರೆ ಈ ಪರಿಸ್ಥಿತಿಯನ್ನು ಹೇಗೆ ಕಡೆಹಾಯಿಸಬೇಕೆಂಬುದು. ಲಂಡನ್ನಿನಲ್ಲಿರುವ ಕೂಲಿಕಾರ ಸರಕಾರದ ಹೊಟ್ಟೆಯಲ್ಲಿರುವ ಅಡಗಿರಬಹುದಾದ ಸಾಮ್ರಾಜ್ಯವಾದದ ಜ್ವರ ಒಮ್ಮಿಂದೊಮ್ಮೆ ಏರಿಬಿಡದಿದ್ದರೆ, ಹಿಂದುಸ್ತಾನ ಸರಕಾರದ ಹೊಣೆಯನ್ನು ವಹಿಸಲು ಕಾಂಗ್ರೆಸ್ಸನ್ನು ಆಮಂತ್ರಿಸುವದೇ ಅದರ ಮುಂದಿರುವ ಏಕಮಾತ್ರ ಉಪಾಯ. ಹೀಗೆ ಮಾಡುವದರಲ್ಲಿ ಏನೂ ವಿಲಂಬವಾಗದಿರಲೆಂದು ಹಾರೈಸುತ್ತೇನೆ. ಆಗ ಕಾಂಗ್ರೆಸು ಮುಸ್ಲಿಮ ಲೀಗಿನೊಡನೆ ಹೇಗೆ ನಡೆದುಕೊಳ್ಳಬೇಕೆಂಬ ಪ್ರಶ್ನೆ ಏಳುತ್ತದೆ.

ಕಾಂಗ್ರೆಸ್ ಮುಂದಾಳುಗಳ ಮೇಲೆ ದೇಶದ ಆಡಳಿತೆಯ ಪೂರ್ಣ ಹೊಣೆಯನ್ನು ಹೊರಿಸಿದರೆ ಅವರು ಕಾಲಮಾನಕ್ಕೆ ಉಚಿತವಾದ ಕರ್ತೃತ್ವಶಕ್ತಿಯನ್ನು ಪ್ರದರ್ಶಿಸುವರೆಂಬ ಬಗ್ಗೆ ನನಗೆ ಸಂದೇಹವೇ ಇಲ್ಲ. ಮುಸ್ಲಿಂ ಲೀಗಿನ ಕಡೆಗೆ ಅವರ ಭಾವನೇನೇ ಇರಲಿ, ಮುಸ್ಲಿಮರು ಹಿಂದುಸ್ತಾನದ ಜನತೆಯ ಒಂದು ಪ್ರಬಲ ಅಂಗವೆಂದೂ ಅವರ ಸಮ್ಮತಿಯಿಲ್ಲದೆ ದೇಶದಲ್ಲಿ ಸ್ಥಿರವಾದ ವ್ಯವಸ್ಥೆಯನ್ನು ಕಾಯ್ದುಕೊಳ್ಳುವದು ಅಶಕ್ಯವೆಂದೂ ಅವರು ಮನಗಂಡೇ ತೀರುವರು. ಅವರ ಪ್ರಥಮ ಕರ್ತವ್ಯವೆಂದರೆ ಮುಸ್ಲಿಂ ಲೀಗಿಗೆ ನಡುಗಾಲದ ಸರಕಾರದಲ್ಲಿ ಯೋಗ್ಯ ಭಾಗವನ್ನು ಕೊಡ

—೬ನೇ ಪುಟಕ್ಕೆ

ಒಂದು ಹರಟೆ

# ಗಡಿಯಾರದ ಪಿಡುಗು

(ಕುಂದಾರು ರಾಮರಾವ್)

ನನ್ನ ಮಿತ್ರನ ಮಡದಿಗೆ ಗಡಿಯಾರದ ಹುಚ್ಚು. ಎಲ್ಲರ ಮನೆಯಲ್ಲಿಯೂ ಒಂದೊಂದು ಗಡಿಯಾರ ಇರುವಾಗ ತಮ್ಮಲ್ಲಿಲ್ಲವಾದರೆ ಅದರಷ್ಟು ಮಾನಹಾನಿ ಬೇರೆಯುಂಟೆ? ಅಂತೂ ವಿಶ್ವಾಮಿತ್ರನು ಬ್ರಹ್ಮರ್ಷಿ ಪಡೆದಂತೆ ಆಕೆಯು ಗಂಡನನ್ನು ಮೆಚ್ಚಿಸಿ ಗೋಡೆಯ ಗಡಿಯಾರವೊಂದನ್ನು ಪಡೆದೇ ಬಿಟ್ಟಳು!

ಆದರೆ ಆಕೆಗೆ ಅದರ ಉಪಟಳದ ಪೂರ್ಣ ಮನವರಿಕೆಯಾದುದು ಇತ್ತೀಚೆಗೆ. ಅದೇನು ಸಾಮಾನ್ಯವೇ? ಅತ್ತೆಯ ಕಾಟ! ಮಕ್ಕಳ ಕೂಗಾಟ! ಪತಿಯ ಪೀಕಲಾಟ! ತನಗೆ ಗೋಳಾಟ!

ಬೆಳಗಿನ ಜಾವದಲ್ಲೇ ಎಚ್ಚತ್ತು ಹಾಸಿಗೆಯಿಂದ ಏಳಲು ಉದಾಸೀನವಾದರೂ ಸೊಸೆಯನ್ನೆಬ್ಬಿಸಲು ಉತ್ಸುಕಳಾಗಿರುತ್ತಿದ್ದ ಅತ್ತೆಗೆ ಗಡಿಯಾರವು ಮಹದುಪಕಾರವನ್ನು ಮಾಡಿತು. ರಾತ್ರಿಯ ಪ್ರತಿ ನಿಮಿಷದಲ್ಲೂ ಜಾಗರೂಕವಾಗಿದ್ದು ಗಂಟೆ ಗಂಟೆಗೆ ಸದ್ದು ಮಾಡಿ ನಿದ್ರಾಭಂಗಗೊಳಿಸುವ ಆಧುನಿಕ ಗಳಿಗೆಬಟ್ಟಲು ಅತ್ತೆಯನ್ನು ರಾತ್ರಿ ಹನ್ನೆರಡು ಗಂಟೆಗೇ ಲಲಿತಾ ಸಹಸ್ರನಾಮ ಪಠಿಸಲು (ಸೊಸೆಯ ಹೆಸರು ಲಲಿತಾ) ಅಣಿಯಾಗಿಸಿತು! ಅಷ್ಟೇ ಸಂಗತಿಯಾಗಿದ್ದರೆ ನಾನೀ ವಿಷಯವನ್ನು ಬರೆದು ಯಾರಿಗೂ ಬೇಸರವುಂಟುಮಾಡುತ್ತಿರಲಿಲ್ಲ. ಆಶ್ಚರ್ಯವೆಂದರೆ ಆ ಅತ್ತೆಯು ಬರಬರುತ್ತಾ ಕವಿಚಕ್ರವರ್ತಿಯಾಗಿಬಿಟ್ಟಳು! ಆಕೆಯ ಮಾತು ರಾಘವಾಂಕ ಕವಿಯ ಅಲಂಕಾರಕ ಶೈಲಿಯಂತಾಯಿತು! ಲಕ್ಷ್ಮೀಶನಂತೆ ಪ್ರಾಸಮಯವಾಯಿತು! ಉದಾಹರಣೆಯಾಗಿ ಅವಳು ಬೆಳಗ್ಗೆ ಎದ್ದೊಡನೆ ನೆರೆಮನೆಯ ಸುಬ್ಬಮ್ಮನೊಡನೆ ಮೊಟ್ಟಮೊದಲು ಪ್ರಸ್ತಾವಿಸುವ ಸೊಲ್ಲನ್ನೇ ಯಥಾ ರೀತಿ ಬರೆಯುವೆ.

“ನನ್ನ ಸೊಸೆಗೆ ಗಡಿಯಾರವು ಏಳೆನ್ನಬೇಕು! ಮತ್ತವಳು ಸಿಡಿಮಿಡಿಗೊಂಡು ಏಳಬೇಕು!!”.... ಇತ್ಯಾದಿ.

ಗಡಿಯಾರವು ಸೂರ್ಯನ ಆವಶ್ಯಕತೆಯನ್ನು ತೊಲಗಿಸಿಬಿಟ್ಟಿದೆ. ಬಿಸಿಲು ಮೈಯನ್ನು ಸುಡುತ್ತಿದ್ದರೂ ಆಕಾಶವನ್ನು ನೋಡಿ ಹೊತ್ತು ನಿರ್ಣಯಿಸುವ ಬದಲಿಗೆ ಜನರು ಒಳಗೋಡಿ ಗಡಿಯಾರದ ದರ್ಶನ ಪಡೆಯುತ್ತಾರೆ. ಇನ್ನು ಮುಂದೆ ಸೂರ್ಯಬಿಂಬದಲ್ಲೇ ಹನ್ನೆರಡರ ವರೆಗಿನ ಅಂಕೆಗಳೂ ಎರಡು ಕೈಗಳೂ ಕಾಣಿಸಿಕೊಳ್ಳುವ ವರೆಗೆ ಆ ಸಹಸ್ರಾಕ್ಷನ ಅಗತ್ಯವು ನಮಗಾಗುವಂತಿಲ್ಲ! ಅತನನ್ನು ನಾವು ಲಕ್ಷಿಸುವುದೂ ಇಲ್ಲ.

ಮೊದಲೇ ನಮ್ಮ ಆರ್ಯಾವರ್ತದಲ್ಲಿ ಪಕ್ಷಪಂಗಡಗಳಿಗೇನೂ ಕಡಿಮೆಯಿಲ್ಲ. ಎಲ್ಲಾ ಪಕ್ಷಗಳನ್ನು ಒಂದುಗೂಡಿಸಿ ಸ್ವಾತಂತ್ರ್ಯ ಹೋರಾಟದಲ್ಲಿ ತೊಡಗಿಸಬೇಕೆನ್ನುವ ಹಿರಿಯಾಳುಗಳಿಗೂ ಕೊರತೆ ಇಲ್ಲ. ಆದರೆ ಅದರ ಸಂಖ್ಯೆಯು ದಿನೇ ದಿನೇ ಹೆಚ್ಚುತ್ತಲಿದೆ. ಇತ್ತೀಚೆಗೆ ತಲೆದೋರಿದ ಬಹುಸಂಖ್ಯಾಕರ ಬೆಂಬಲವುಳ್ಳ ಪಕ್ಷವೆಂದರೆ ರಿಸ್ಟ್ ವಾಚ್ ಕಟ್ಟಿಕೊಳ್ಳುವವರದು! ಈ ಪಾರ್ಟಿಯ ಅನೇಕರು ವಾಚೇತರರನ್ನು ಮಾನವ ಸಹಜ ಔದಾರ್ಯದಿಂದ ನೋಡುವರೆಂಬುದಕ್ಕೆ ನನಗೀವರೆಗೆ ಸಾಕಾದ ನಿದರ್ಶನ ದೊರೆಯಲಿಲ್ಲ!

“ಈಗ ಕುಲವೆಲ್ಲಿದೆ ಸ್ವಾಮಿ, ಎಲ್ಲಾ ಕೆಟ್ಟು ಹೋಯಿತು. ಸದ್ಯಕ್ಕೆ ಇರುವುದು ಹೆಣ್ಣೊಂದು ಗಂಡೊಂದು. ಹೀಗೆ ಎರಡು ಕುಲ!” ಎಂದು ನಮ್ಮ ಕುಲಪುರೋಹಿತರು ಯಾವಾಗಲೂ ಹೇಳುವರು. ಸನಾತನಿಗಳ ಅಭಿಪ್ರಾಯವೆಲ್ಲವೂ ಹೀಗೆಯೇ ಎಂಬುದನ್ನು ನಾನು ಬಲ್ಲೆ. ಆದರೆ ಅವರಿಗೆ ಸುಧಾರಿತವಾದ ಜನಾಂಗವನ್ನು ವಿಭಾಗಿಸುವ ರೀತಿ ತಿಳಿಯದು. ಸುಮ್ಮನೇ ಏನೇನೋ ಹರಟುತ್ತಾ ತಲೆ ಕರದು ಮಾಡಿಕೊಳ್ಳುತಿರುವರು. ಅವರು ನನ್ನೊಬ್ಬನನ್ನಾದರೂ ತಮ್ಮ ಪಂಕ್ತಿಗೆ ಸೇರಿಸಿಕೊಂಡರೆ ಅವರಿಗೆ ಈ ರೀತಿ ಸಲಹೆ ಕೊಡಬಲ್ಲೆ. ‘ಗಂಟೆಯ ಬಂಟರು ಮತ್ತು ಗಡಿಯಾರದಿಂದ ಗಡೀಪಾರಾದವರು’ ಹೀಗೆರಡೇ ವಿಧ ಜಾತಿಯೆಂದು ತಿಳಿದುಕೊಳ್ಳಬೇಕು ಎಂದು. ಬ್ರಾಹ್ಮಣರ ಕುರುಹು ತೋರಿಸುವ ಜನಿವಾರದಂತೆ ನಾಗರಿಕರಿಗೆ ತಮ್ಮ ಸಂಸ್ಕೃತಿಯನ್ನು ಹೆರರಿಗೆ ತೋರಿಸುವ ಹೆಗ್ಗುರುತಿದು!

ವೃತ್ರಾಸುರನನ್ನು ಜಯಿಸಲಿಕ್ಕೆ ದೇವೇಂದ್ರನಿಗೆ ವಜ್ರಾಯುಧ ಧರಿಸಬೇಕಾಯಿತು. ರಾವಣೇಶ್ವರನನ್ನು ಗೆಲ್ಲಲು ಶ್ರೀ ರಾಮನಿಗೆ ದಿವಿಜೇಂದ್ರನು ಕಳುಹಿಸಿಕೊಟ್ಟ ರಥಚಾಪಾಸ್ತ್ರಗಳನ್ನು ಹಿಡಿಯುವ ಅಗತ್ಯವುಂಟಾಯಿತು. ಬ್ರಿಟಿಷರನ್ನು ಬೆದರಿಸಲು ಗಾಂಧೀಜಿಯವರಿಗೆ ಅಹಿಂಸಾಸ್ತ್ರವನ್ನು ತೊಡಬೇಕಾಯಿತು. ಅಂತೆಯೇ ತರುಣರಿಗೆ ಕೆಲವು ತೇಜಸ್ವಿನಿಯರಾದ ರಮಣಿಯರನ್ನು ಜಯಿಸಿ ಮೂಗು ಚುಚ್ಚಿಸಿ, ಕತ್ತಿಗೆ ಸರಪಣಿ, (ಮಂಗಳ ಸೂತ್ರ) ಸಿಕ್ಕಿಸಬೇಕಾದರೆ ಮೊಟ್ಟ ಮೊದಲು ವಧು ಬೇಟೆಗೆ ಹೊರಡುವಾಗ ಮುಂಗೈ ಗಡಿಯಾರವನ್ನು ಧರಿಸಬೇಕು! ಪತಿಯ ಕರವು ಸತಿಯ ಕರವನ್ನಲಂಕರಿಸುವ ಮೊದಲು ಅತನ ‘ಕರಗ್ರಹಣ’ ಮಾಡುವ ಭಾಗ್ಯ ರಿಸ್ಟ್‌ವಾಚಿಗೆ.

ನಾವು ಬ್ರಿಟಿಶರ ದಾಸರಾಗಿರುವುದು ನಿಜವಾದರೆ ಇಡೀ ಪ್ರಪಂಚವೂ ಗಡಿಯಾರದ ದಾಸಾನುದಾಸರಾಗಿರುವುದೂ ಅಷ್ಟೇ ಸತ್ಯ. ಅದು ರಾಜಕೀಯ ಸಾಮಾಜಿಕ ಮೊದಲಾದ ಮಾನವ ಜೀವನದ ಪ್ರತಿಯೊಂದು ಅಂಗದಲ್ಲೂ ತನ್ನ ಪ್ರಭುತ್ವ ಸ್ಥಾಪಿಸಿದೆ. ಜವಾನನಿಂದ ಹಿಡಿದು ದಿವಾನರ ವರೆಗೆ ಎಲ್ಲರೂ ಗಡಿಯಾರವು ತೋರಿಸುವ ನಿಯಮಿತ ವೇಳೆಗೆ ಸರಿಯಾಗಿ ಕೆಲಸಕ್ಕೆ ಹಾಜರಾಗುವವರೆ. ಅದು ಯಾವಾಗ ನಾವು ಮನೆಗೆ ತೆರಳುವ ಸಮಯವನ್ನು ತೋರಿಸುವದೋ ಎಂದು ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಅವರೆಲ್ಲರೂ ನಿರೀಕ್ಷಿಸುತ್ತಿರುವರು!

ಮನೆಯಲ್ಲಿ ಅದು ಕೊಡುವ ತೊಂದರೆಯಂತೂ ವರ್ಣನಾತೀತ. ಗಂಟೆ ಹನ್ನೆರಡು ಬಾರಿಸಿತೋ— ಜಠರಾಗ್ನಿಯು ಪ್ರಳಯಾಗ್ನಿಯಂತೆ ಧಗಧಗಿಸುವುದು. ಅಡುಗೆಯಾಗುವುದಕ್ಕೆ ಐದೇ ಮಿನಿಟು ಇದ್ದರೂ ನಮಗೀಗಿರುವ ಕಣ್ಣುಗಳಿಗೆ ಫಾಲಲೋಚನನ ಹಣೆಗಣ್ಣಿನ ಶಕ್ತಿಯನ್ನು ಎರವಾಗಿ ಪಡೆದು ಅಡುಗೆಮನೆಗೆ ನುಗ್ಗುವೆವು. ಪರಿಸ್ಥಿತಿಯು ಅತೃಪ್ತಿಕರವಿದ್ದರೆ ಆಗ ತಾನೇ ಗಡಿಯಾರವು ‘ಟಣ್ ಟಣ್’ ಎಂದು ಹನ್ನೆರಡುಹೊಡೆದು ನಾದರಿಯಾಗಿ ತೋರಿಸಿದಂತೆ ಹೆಂಡಿರ ಬೆನ್ನ ಮೇಲೆಯೇ ಗಂಟೆ ಬಾರಿಸುವವರೂ ಇದ್ದಾರೆ!

ಇಷ್ಟೆಲ್ಲ ಹೇಳಿದುದು ಕೇವಲ ಕಲ್ಪನೆಯಿಂದಲ್ಲ. ವಾಚನ್ನು ಕಟ್ಟಿಕೊಂಡು ಆ ಪೇಚನ್ನು ಸ್ವಂತವಾಗಿ ಅನುಭವಿಸಿದ್ದೇನೆ. ಮನೆಯ ಚಿಕ್ಕ ಚಿಕ್ಕವರೆಲ್ಲರೂ ಅದಕ್ಕಪೇಕ್ಷೆ ಪಡುವವರೇ. ಪಾಪ! ಮಾನವನ ಬಿಸಿದೇಹದ ಸಂಪರ್ಕವಿಲ್ಲದ ಒಂದೇ ನಿಮಿಷವೂ ಅದಕ್ಕೆ ದೊರೆಯದ ಹಾಗಾಯಿತು. ಮೊದಲೇ ಪರದಾಸ್ಯದಲ್ಲಿದ್ದು ಕೊನೆಗೆ ಹೊಣೆಗೆಟ್ಟ ಅಡಿಗೆ ಬೇಸತ್ತು ಅದು ದೀರ್ಘಾವಧಿಯ ಸಂಪು ಹೂಡಿತೆಂದು ಬೇರೆ ಹೇಳಬೇಕೆ ?

ಇನ್ನೊಂದು ಪ್ರಬಲ ಕಾರಣಕ್ಕಾಗಿ ನಾನದನ್ನು ದ್ವೇಷಿಸುತ್ತೇನೆ. ಬಹಳ ಹಿಂದಿನಿಂದಲೂ ತಿಥಿ, ವಾರ, ನಕ್ಷತ್ರಗಳಿಗೆ ಮೊದಲಾದವನ್ನು ಹೇಳುತಿದ್ದ ಪಂಚಾಂಗ ಭಟ್ಟರು ಪ್ರತಿಫಲವಾಗಿ ದಕ್ಷಿಣೆಯನ್ನು ಸೊಂಟಕ್ಕೆ ಸಿಕ್ಕಿಸಿಕೊಳ್ಳುತಿದ್ದರು ನಾನಾದರೋ ವಾಚು ಕಟ್ಟಿಕೊಂಡು ತಿರುಗಾಡುತಿದ್ದಾಗ “ಟೈಮೆಷ್ಟು?” ಎಂದು ಪ್ರಶ್ನಿಸುವವರಿಗೇನೂ ಕಡಿಮೆಯಿಲ್ಲ. ಅವರಿಗೆ ಸಲಸಲವೂ ನಾನು ಹೇಳಬೇಕು ! ಅದರೂ ನೂರಾರು ಜನರಲ್ಲಿ ನನಗೀವರೆಗೆ ಕಾಸು ಕೊಟ್ಟವರಿಲ್ಲ. ಕೇಳಿದರೂ ವ್ಯರ್ಥವೆಂದು ಸುಮ್ಮನಿದ್ದೇನೆ. ಊರಿಗೆಲ್ಲಾ ಆಧುನಿಕ ಪಂಚಾಂಗ ಭಟ್ಟನಾಗಿಯೂ ಪುಕ್ಕಟೆ ಕೆಲಸ ಮಾಡಬೇಕೆ ? ಪೂರ್ವಜರ ಪದ್ಧತಿಗೆ ತಿಲಾಂಜಲಿ ಕೊಡಲೇ ?






## ತುಂಬಿದ ಕೊಡ ಮತ್ತು ಇತರ ಕಥೆಗಳು

ಬರೆದವರು: ಡಾ. ದೊಡ್ಡೇರಿ ವೆಂಕಟಗಿರಿರಾವ್. ಪ್ರಕಾಶಕರು: ಸಾಧನ ಪ್ರಕಟನಾಲಯ, ಸಾಗರ-ಶಿವಮೊಗ್ಗ. ೯೬ ಪುಟ ಬೆಲೆ ರೂ. ೧-೦-೦

ಈ ಕಥೆಗಳಲ್ಲಿಯ ಅತ್ಯುತ್ತಮ ಗುಣವೆಂದರೆ ಅವುಗಳ ಸಂಕ್ಷಿಪ್ತತೆ. ಏಕೆಂದರೆ ೯೬ ಪುಟಗಳಲ್ಲಿ ೧೪ ಕಥೆಗಳನ್ನು ಲೇಖಕರು ಕೊಟ್ಟಿದ್ದಾರೆ. ಅದು ದರಿಂದ ಅತಿ ಸಾಮಾನ್ಯ ಅಥವಾ ಚರ್ವಿತಚರ್ವಣದ ವಸ್ತುವನ್ನು ಇಟ್ಟುಕೊಂಡಲ್ಲಿಯೂ ಓದುಗರಿಗೆ ತಲೆಬೇಸರದ ಛಾಯೆ ಹುಟ್ಟುವ ಮೊದಲೇ ಕಥೆಯನ್ನು ಮುಗಿಸಲು ಅವರಿಗೆ ಸಾಧ್ಯವಾಗಿದೆ. ಶ್ರೀ ಅ. ನ. ಕೃಷ್ಣರಾಯರು ಮುನ್ನುಡಿಯಲ್ಲಿ ಹೇಳಿರುವಂತೆ ಇದರಲ್ಲಿರುವ ಕಥೆಗಳೆಲ್ಲ ಒಂದೇ ಮಟ್ಟದವಲ್ಲ. ಆದರೆ ಅವರು ತೋರಿಸಿಕೊಟ್ಟ “ಯಾವ ಕತೆಗಾರನಿಗೆ ಬೇಕಾದರೂ ಕೀರ್ತಿತರುವ” ನಾಲ್ಕು ಕಥೆಗಳಲ್ಲಿ ಸೇರಿರುವ “ತುಂಬಿದ ಕೊಡ” ದ ವಸ್ತುವೂ ಅವರು ಉಲ್ಲೇಖಿಸಿರುವ ಇತರ ಕೆಲವು ಕಥೆಗಳ ವಸ್ತುಗಳಂತೆ ಹಳೆಯದೇ ಆಗಿದೆಯೆಂದು ಹೇಳಬಹುದು. ಉತ್ತಮ ಪಂಕ್ತಿಗೆ ಅವರು ಸೇರಿಸಿರುವ ಇನ್ನೊಂದು ಕಥೆ “ನಟಿ” ಪ್ರಾಯಶಃ ಸಂಗ್ರಹದಲ್ಲೆಲ್ಲ ಅತ್ಯುತ್ತಮವಾದುದು. ಆದರೆ ಅದು ಚೆಕಾಫನ ಕಥೆಯ ಆಧಾರದಿಂದ ಬರೆದುದೆಂಬುದನ್ನು ಗಮನಿಸಬೇಕು. ಇಲ್ಲಿ ಇನ್ನೊಂದು ಮಾತು ಹೊಳೆಯುತ್ತದೆ. ಈಚೆಗಿನ ಕೆಲ ಕಥಾಸಂಗ್ರಹಗಳಲ್ಲಿ ಪರಭಾಷೆಯಿಂದ ಅನುವಾದಿಸಿದ ಒಂದೆರಡು ಕಥೆಗಳು ಸೇರಿದಲ್ಲಿ ಅವು ಸ್ವತಂತ್ರ ಕಥೆಗಳೆದುರು ಅಬ್ಬರದಿಂದ ಎದ್ದು ಕಾಣುವದನ್ನು ಅನೇಕರು ಗಮನಿಸಿರಬಹುದು. ಅ. ನ. ಕೃಷ್ಣರಾಯರು ಹೇಳುವ “ಕನ್ನಡದ ಸಣ್ಣ ಕತೆಗಳ ಸ್ವರ್ಣಯುಗ” ಕಳೆದ ನಂತರ ಬರುತಿರುವ ಕಥೆಗಳಲ್ಲಿ ಹೆಚ್ಚಿನವು ಎಂಥೋನ್ನತಿಯನ್ನು ಮುಟ್ಟಿಲ್ಲವೆಂದು ಇದು ತೋರಿಸುತ್ತದೆ. “ಪ್ರಗತಿಶೀಲ ಯುಗ”ದ ಕಥೆಗಾರರು ಇದನ್ನು ಗಮನಿಸಬೇಕಾಗಿದೆ ಇರಲಿ. “ಸಮಸ್ಯೆ” ಎಂಬ ಇನ್ನೊಂದು ಕಥೆ ಸದ್ಯದ ಸಂಗ್ರಹದ ಅತ್ಯುತ್ತಮ ಸ್ವತಂತ್ರ ಕಥೆ. ಇಲ್ಲಿ ಕಥೆಗಾರನ ಕಲ್ಪನೆ ಚಾತುರ್ಯಗಳಿಗೆ ಮೂರು ಪುಟಗಳಲ್ಲಿಯೆ ಅತ್ಯಂತ ಚಮತ್ಕಾರಕವಾದ ಪರಿಣಾಮವನ್ನು ಸಾಧಿಸಲು ಸಾಧ್ಯವಾಗಿದೆ.

ಡಾ. ದೊಡ್ಡೇರಿಯವರ ಕಥೆಗಳು ಇನ್ನೊಂದು ಬಗೆಯಿಂದ ಅಭಿನಂದನೀಯವಾಗಿವೆ. ಅವುಗಳಲ್ಲಿ ಜೀವನದ ಬಗ್ಗೆ ಕಟುತ್ವ, ವೈರಾಗ್ಯ ಕಾಣಿಸುವದಿಲ್ಲ: ಪುರಾಕರ್ಮವಾದ, ಸಂಸಾರ ಸಾಗರವಾದ, ನಿರಾಶಾವಾದದಿಂದ ತುಂಬಿದ ಕಥೆಗಳೇ ಅತ್ಯುತ್ತಮ ಕಲಾಕೃತಿಗಳಾಗಿ ಶೆಲ್ಲಿಹೇಳಿದ “Our sweetest songs are those that tell us saddest thoughts” ಎಂಬ ಸಿದ್ಧಾಂತಕ್ಕೆ ನಿದರ್ಶನಗಳಾಗಿ ಕನ್ನಡದಲ್ಲಿ ಬೆಳೆದುದು ಹೆಚ್ಚು. ಪ್ರಗತಿ ಶೀಲಯುಗದ ಡಾ. ದೊಡ್ಡೇರಿಯವರು ಈ ಸಂಪ್ರದಾಯವನ್ನು ಹರಿದು ಆಶಾವಾದದತ್ತ ಜನತೆಯನ್ನು ಎಳೆಯಲೆಳಸಿದ್ದಾರೆ. ಅದರಲ್ಲಿ ಅವರಿಗೆ ಸಾಕಷ್ಟು ಯಶಸ್ಸೂ ಲಭಿಸಿದೆ.

## ರಂಜನ

ಲೇಖಕರು: ಶ್ರೀ ವಸುದೇವ ಭೂಪಾಲಂ. ಪ್ರಕಾಶಕರು: ಕರ್ನಾಟಕ ಸಂಘ ಶಿವಮೊಗ್ಗ. ೭೬ ಪುಟ, ಬೆಲೆ ರೂ. ೧-೦-೦

ಶ್ರೀ ಭೂಪಾಲಂ ಅವರು ನಾಲ್ಕು ವರ್ಷಕ್ಕಿಂತಲೂ ಹಿಂದೆ ಬರೆದ ಭಾವಗೀತಗಳ ಸಂಗ್ರಹವಿದು. “ಅಭ್ಯಾಸ ಕವಿತೆ” ಗಳೇ ಇದರಲ್ಲಿ ಅರ್ಧಕ್ಕಿಂತ ಹೆಚ್ಚು ಭಾಗವನ್ನು ಅಕ್ರಮಿಸಿವೆ. ಆದರೆ ತರುಣ ಕವಿ ಭೂಪಾಲಂ ಅವರ ಪ್ರತಿಭೆಯ ಝುಲಕು ಅಲ್ಲಲ್ಲಿ ಕಾಣಸದೆ ಇಲ್ಲ. ಕವಿಗಳು ಛಂದಸ್ಸಿನಲ್ಲಿ ಹಲವು ಹೊಸ ಪ್ರಯೋಗಗಳನ್ನು ಮಾಡಿದ್ದಾರೆ. ಆದರೆ ಇಂಥ ಪ್ರಯೋಗಗಳು ಯಶಸ್ವಿಯಾಗಬೇಕಾದರೆ ಕವಿಗೆ ಭಾವವ್ಯಂಜನೆಯ ಸಿದ್ಧಿ ಮೊದಲು ದೊರಕಿರಬೇಕು. ಹಾಗಾದರೆ ಮಾತ್ರ ಹೊಸ ಪ್ರಯೋಗಗಳು ಓದುವವರಿಗೆ ಎಡವಿದಂತೆನಿಸುವದಿಲ್ಲ. ಶ್ರೀ ಭೂಪಾಲಂರಿಗೆ ಆ ಸಿದ್ಧಿ ಇನ್ನೂ ಪೂರ್ಣ ದೊರಕಿಲ್ಲ. ದೊರಕೀತೆಂಬ ಖಂಡಿತ ಆಶೆಯನ್ನು ಹಿಡಿಯಬಹುದೆಂದು ಮಾತ್ರ ಧೈರ್ಯದಿಂದ ಹೇಳಬಹುದು.

ಈ ಪುಸ್ತಕದ “ಪ್ರವೇಶ”ದ ಹದಿನೈದು ಪುಟಗಳು ಮಾತ್ರ ತೀರ ನಿರರ್ಥಕವಾಗಿವೆ. ಶ್ರೀ ಭೂಪಾಲಂ ಅವರು ಇಲ್ಲಿ ಕವಿಕಾವ್ಯ ಮೀಮಾಂಸೆ ಮಾಡಲು ಹೋಗಿ ಸೋತಿದ್ದಾರೆ. ಅವುಗಳಲ್ಲಿ ವಿಚಾರಗಳ ಸುವ್ಯವಸ್ಥೆಯಾಗಲಿ ಅಭಿವ್ಯಕ್ತಿಯ ಸ್ಪಷ್ಟತೆಯಾಗಲಿ ಚಿಂತನೆಯ ಸಾವೀನ್ಯ ವೈಖರಿಗಳಾಗಲಿ ಕಾಣುವದಿಲ್ಲವೆಂದು ವಿಷಾದದಿಂದ ಹೇಳಬೇಕಾಗಿದೆ.

## ಗಾಂಧೀ ವಿಚಾರದೋಹನ

ಮೂಲ:- ಶ್ರೀ ಕಿಶೋರಲಾಲ ಮಶ್ರೂವಾಲಾ, ಅನುವಾದಕರು:- ಶ್ರೀ ಗುರುನಾಥ ಜೋಶಿ, ಸಂಪಾದಕರು:- ರಂ. ರಾ. ದಿವಾಕರ, ಪ್ರಕಾಶಕರು:- ಕರ್ನಾಟಕ ಶಿಕ್ಷಣ ಸಮಿತಿ ಹುಬ್ಬಳ್ಳಿ, ಏಕಮೇವ ಏಜಂಟರು:- ಸಾಹಿತ್ಯ ಭಾಂಡಾರ ಹುಬ್ಬಳ್ಳಿ, ೨೦೦ ಪುಟ, ರೂ. ೨/೮.

ಮಹಾತ್ಮಾ ಗಾಂಧಿಯವರ ವಿಚಾರಗಳನ್ನು ಸೂತ್ರ ರೂಪವಾಗಿ ಸಂಗ್ರಹಿಸಿ ಶ್ರೀ ಮಶ್ರುವಾಲಾರು ಬರೆದ ಪುಸ್ತಕ ಗಾಂಧೀ ಸಾಹಿತ್ಯದಲ್ಲಿ ಅಧಿಕಾರವಾಣಿಯನ್ನು ಪಡೆದ ಗ್ರಂಥ ಮಹಾತ್ಮರು ಜೀವನದ ವಿವಿಧ ಅಂಗಗಳನ್ನು ಕುರಿತು ಯಾವ ಆದರ್ಶವನ್ನು ಪ್ರತಿಪಾದಿಸುವರೆಂದು ತಿಳಿಮಾತಿನಲ್ಲಿ ವಿವರಿಸಿ ಈ ಪುಸ್ತಕ ಅವರ ಆದರ್ಶಗಳನ್ನು ಆಚರಣೆಗೆ ತರಬೇಕೆನ್ನುವವರಿಗೆ ತುಂಬ ಉಪಕಾರ ಮಾಡಿದೆ. ೧೯೩೬ ರಲ್ಲಿ ಶಿಕ್ಷಣ ಸಮಿತಿಯವರು ಪ್ರಕಟಿಸಿದ ಈ ಪುಸ್ತಕದ ಕನ್ನಡ ಅನುವಾದ ಇದೀಗ ಎರಡನೇ ಮುದ್ರಣವನ್ನು ಕಂಡಿದೆ. ಮೂಲದಲ್ಲಿ ಶ್ರೀ ಮಶ್ರೂವಾಲಾರು ಮಾಡಿದ ಕೆಲವು ವ್ಯತ್ಯಾಸಗಳನ್ನು ಒಳಗೊಂಡು ಈ ಸಂಸ್ಕರಣ ಪರಿಪೂರ್ಣವಾಗಿದೆ. ಸುಂದರ ಅಂತರಂಗ ಬಾಹ್ಯಾಂಗಗಳನ್ನೊಳಗೊಂಡ ಈ ಪುಸ್ತಕವನ್ನು ಕನ್ನಡಿಗರಿಗೆ ಬೇರೆ ಅನುಮೋದಿಸುವ ಅವಶ್ಯಕತೆಯೇ ಇಲ್ಲ.

## ಭಗತಸಿಂಗ

ಮೂಲಃ— ಅಜಯ ಕುಮಾರ ಘೋಷ. ಅನುವಾದಃ— ಎಸ್. ಎಸ್. ನಂಜುಂಡಸ್ವಾಮಿ, ಪ್ರಕಾಶಕರುಃ— ಜನತಾಸಾಹಿತ್ಯ, ಹುಬ್ಬಳ್ಳಿ. ೫೬ ಪುಟ ಬೆಲೆ ೦—೮—೦.

ಅತ್ಯಂತ ಉದಾತ್ತವಾದ ಧ್ಯೇಯದಿಂದ ಜೀವದ ಹಂಗು ತೊರೆದು ಹಿಂದುಸ್ತಾನದ ಸ್ವಾತಂತ್ರ್ಯಕ್ಕಾಗಿ ತಮಗೆ ಸರಿದೋರಿದಂತೆ ದುಡಿದು ತಲೆದಂಡ ತೆತ್ತು ಹಿಂದೀ ರಾಜಕಾರಣದ ಇತಿಹಾಸದಲ್ಲಿ ಪುರಾಣಪುರುಷರಂತಾಗಿ ಹೋಗಿರುವ ಭಗತಸಿಂಗರನ್ನು ಅರಿಯದವರಾರು? ಅವರೊಡನೆ ಭಯೋತ್ಪಾದಕ ಸಂಸ್ಥೆಯಲ್ಲಿ ದುಡಿದು ದೀರ್ಘಾವಧಿ ಶಿಕ್ಷೆಗೊಳಗಾಗಿ ಈಚೆಗೆ ಬಿಡುಗಡೆ ಹೊಂದಿರುವ ಶ್ರೀ ಘೋಷರು ಬರೆದ ಈ ಪುಸ್ತಕ ಭಗತ ಸಿಂಗರ ಜೀವನ-ವಿಚಾರ ವ್ಯಕ್ತಿತ್ವಗಳ ಮೇಲೆ ಒಳ್ಳೆ ಬೆಳಕು ಚೆಲ್ಲುತಿದೆ. ಸಿಂಗರ ಸಹಯೋಗಿಗಳಲ್ಲನೇಕರು ಈಗ ಹಿಂದೀ ಕಮ್ಯುನಿಷ್ಟ ಪಕ್ಷದಲ್ಲಿದ್ದಾರೆ. ಪ್ರಸ್ತುತ ಲೇಖಕರೂ ಹಾಗೆಯೆ. ಎಲ್ಲ ಕಮ್ಯುನಿಸ್ಟ್ ಲೇಖಕರಂತೆ ಇವರೂ ಈ


–೧೬ನೇ ಪುಟ ನೋಡಿರಿ




## ರಾಷ್ಟ್ರದ ಆರ್ಥಿಕ ಪರಿಸ್ಥಿತಿ ವಿಮರ್ಶೆ

ರಿಝರ್ವ ಬ್ಯಾಂಕಿನ ಗವರ್ನರರಾದ ಸರ್ ಚಿಂತಾಮಣರಾವ ದೇಶಮುಖರು ಮೊನ್ನೆ ಮದರಾಸಿನಲ್ಲಿ ನಮ್ಮ ದೇಶದ ಆರ್ಥಿಕ ಪರಿಸ್ಥಿತಿಯನ್ನು ವಿಮರ್ಶಿಸುತ್ತ ಮಾಡಿದ ಭಾಷಣವು ಅತ್ಯಂತ ಮನನೀಯವಾಗಿದೆ. ಇಂದಿನ ವರೆಗೆ ರಿಝರ್ವ ಬ್ಯಾಂಕಿನ ಗವರ್ನರರು ನಮ್ಮ ರಾಷ್ಟ್ರದ ಆರ್ಥಿಕ ಪರಿಸ್ಥಿತಿಯನ್ನು ನಿರ್ದಾಕ್ಷಿಣ್ಯವಾಗಿ ವಿಮರ್ಶಿಸುತ್ತಿರಲಿಲ್ಲ. ಕಾಲಮಾನ ಪರಿಸ್ಥಿತಿಗನುಸರಿಸಿ ಈಗಿನ ಗವರ್ನರರು ತುಸು ಗಟ್ಟಿಮನಸು ಮಾಡಿ ಕೆಲವು ದಿಟ್ಟತನದ ಮಾತುಗಳನ್ನಾಡಿರುವದು ಸಂತೋಷದ ಸಂಗತಿ. ಸರ್ ಚಿಂತಾಮಣರಾಯರು ಅನುಷಂಗಿಕವಾಗಿ ನಮ್ಮ ದೇಶದ ಈಗಿನ ಆರ್ಥಿಕ ಪರಿಸ್ಥಿತಿಯನ್ನು ಕುರಿತು ಬಹಳ ಮಹತ್ವದ ಒಂದು ಎಚ್ಚರಿಕೆಯನ್ನು ಕೊಟ್ಟಿರುವರು. ಆರ್ಥಿಕ ಸಂಸ್ಥೆಗಳ ಧ್ಯೇಯ ಧೋರಣಗಳೇನಿರಬೇಕೆಂಬದನ್ನು ಬಿಚ್ಚು ಬಗೆಯಿಂದ ಪರಾಮರ್ಶಿಸಿ ಒಂದು ದೊಡ್ಡ ಉಪಕಾರವನ್ನು ಅವರು ಮಾಡಿರುವರು. ರಾಷ್ಟ್ರ ಹಣಕಾಸಿನ ನಿಲುಮೆಯನ್ನು ತಿದ್ದಿ ಅದಕ್ಕೆ ಯೋಗ್ಯ ದಾರಿಯನ್ನು ತೋರಿಸುವ ಕೆಲಸವು ರಿಝರ್ವ ಬ್ಯಾಂಕಿನದಾಗಿದ್ದರೂ ಇಂದಿನ ವರೆಗೆ ಅಂತಹ ಕಾರ್ಯವನ್ನು ರಿಝರ್ವ ಬ್ಯಾಂಕಿನವರು ಮಾಡುತ್ತಿರಲಿಲ್ಲೆಂದು ಹೇಳಿದರೆ ತಪ್ಪಾಗಲಾರದು. ಪರಕೀಯ ಸರಕಾರದ ಕೈಗೊಂಬೆಗಳೇ ರಿಝರ್ವ ಬ್ಯಾಂಕಿನ ಗವರ್ನರರಿರುತ್ತಿದ್ದುದರಿಂದ ಸರಕಾರದ ಧೋರಣವನ್ನು ಟೀಕಿಸುವ ಧೈರ್ಯವು ಅವರಿಗಾಗುತ್ತಿರಲಿಲ್ಲ. ಆದರೆ ಇತ್ತೀಚೆಗೆ ಮಂತ್ರಿತ್ರಯರ ಯೋಜನೆಯಿಂದ ಸ್ವಾತಂತ್ರ್ಯವು ಹಿಂದುಸ್ತಾನಕ್ಕೆ ಬೇಗ ಲಭಿಸುವ ಲಕ್ಷಣಗಳು ತೋರುತ್ತಿದ್ದರಿಂದ ರಿಝರ್ವ ಬ್ಯಾಂಕಿನ ಗವರ್ನರರೂ ತಮ್ಮ ಭೂಮಿಕೆಯನ್ನು ಬದಲಿಸುವ ಸಾಹಸ ಮಾಡಿರುವಲ್ಲಿ ಸೋಜಿಗವಿಲ್ಲ.

ಪರರಾಷ್ಟ್ರದವರು ನಮ್ಮ ದೇಶದ ಸರಕುಗಳನ್ನು ಕೊಂಡುಕೊಳ್ಳುವ ಪ್ರಮಾಣವು ಯುದ್ಧ ಮುಗಿದ ನಂತರ ಇಳಿದಿರುವದು. ಸರಕಾರದವರು ಯುದ್ಧಕ್ಕಾಗಿ ಕೂಡಿಸುತ್ತಿದ್ದ ಸಾಮುಗ್ರಿಗಳ ಪ್ರಮಾಣವೂ ಈಗ ಕಡಿಮೆಯಾಗಿದೆ. ಅದರಿಂದ ಹೊರಗಿನ ಹಣವು ನಮ್ಮ ದೇಶಕ್ಕೆ ಬರುವದು ಕಡಿಮೆಯಾಗುತ್ತ ನಡೆದಿದೆ. ನಮ್ಮ ದೇಶದ ಹೆಸರಿನಿಂದ ಅಪಾರ ಹಣವು ಇಂಗ್ಲಂಡದಲ್ಲಿ ಕೂಡಬಿದ್ದಿದೆ. ಅದನ್ನು ಕೃತ್ರಿಮ ಉಪಾಯಗಳಿಂದ ಇದ್ದಲ್ಲಿಯೇ ಕರಗಿಸುವ ಸಾಹಸವನ್ನು ರಿಝರ್ವ ಬ್ಯಾಂಕಿನವರು ವಿರೋಧಿಸುತ್ತಿರುವದಾಗಿ ಸರ್ ಚಿಂತಾಮಣರಾಯರು ಖಂಡತುಂಡಾಗಿ ಹೇಳಿದ್ದುದು ಅಭಿನಂದನೀಯ.

ಹೊರಗಿನಿಂದ ಸರಕುಗಳನ್ನು ಕೊಂಡುಕೊಳ್ಳಲು ಇಂಗ್ಲಂಡದಲ್ಲಿ ನಮ್ಮ ದೇಶದ ಹೆಸರಿನಿಂದ [illegible]ಬಿದ್ದ ಹಣದ ಉಪಯೋಗವಾಗುವದವಶ್ಯವಿದೆ. ಇದಕ್ಕೆ ಆಯಾತ ನಿಯಂತ್ರಣವನ್ನು ಸಡಿಲಿಸಿ ಪರದೇಶದಿಂದ ಸರಕುಗಳು ಆಯಾಸವಿಲ್ಲದೆ ಬರುವಂತೆ ಮಾಡುವದಗತ್ಯ. ಸರಕಾರವಿನ್ನೂ ಈ ನಿಯಂತ್ರಣವನ್ನು ಬಿಗಿಹಿಡಿದಿರುವದು ತಪ್ಪೆಂದು ಸರ್ ಚಿಂತಾಮಣರು ಟೀಕಿಸಿರುವದು ಯೋಗ್ಯವಾಗಿದೆ. ಅನೇಕ ಹೊಸ ಹೊಸ ಉದ್ಯೋಗ ವ್ಯವಸಾಯಗಳನ್ನು ನಮ್ಮ ದೇಶದಲ್ಲಿ ಆರಂಭಿಸಬೇಕಾದರೆ ಪರದೇಶಗಳಿಂದ ಯಂತ್ರೋಪಕರಣಗಳು ನಮ್ಮ ದೇಶಕ್ಕೆ ಬರಬೇಕು. ಅವುಗಳನ್ನು ತರಿಸಿಕೊಳ್ಳಲು ಸರಕಾರದವರು ಬೇಗ ಅಪ್ಪಣೆ ಕೊಡುವದಿಲ್ಲ. ಯಾಕೆಂದರೆ ಅವರ ದೇಶದಲ್ಲಿದ್ದ ನಮ್ಮ ಇಡುಗಂಟನ್ನು ಕೊಟ್ಟುಬಿಡುವ ಪ್ರಸಂಗವು ಇಂಗ್ಲಂಡಕ್ಕೆ ಬರುವದರಿಂದ ಅದು ಹಿಂದೆ ಮುಂದೆ ನೋಡುತ್ತದೆ. ಬ್ರಿಟನ್ನದಲ್ಲಿಂದಲೇ ಸರಕುಗಳನ್ನು ಕೊಳ್ಳುವದಾದರೆ ಮಾತ್ರ ಬೇಗ ಸಮ್ಮತಿ ಸಿಗುತ್ತದೆ. ಬ್ರಿಟಿಶ ಸರಕಾರದ ಈ ಧೋರಣವನ್ನು ಬಯಲಿಗೆಳೆದು ಧೈರ್ಯವನ್ನು ತೋರಿಸಿದ ಬಗೆಗೆ ಸರ್ ಚಿಂತಾಮಣರಾಯರನ್ನು ನಾವು ಅಭಿನಂದಿಸುತ್ತೇವೆ.

ಬ್ಯಾಂಕುಗಳು ಯಾವ ಮಾರ್ಗವನ್ನು ಅನುಸರಿಸಿ ಮುಂದೆ ಸಾಗಬೇಕೆಂಬ ವಿಷಯದಲ್ಲಿ ಅವರು ಕೆಲವು ಬೆಲೆಯುಳ್ಳ ಸೂಚನೆಗಳನ್ನು ಮಾಡಿರುವರು ಬ್ಯಾಂಕು ಬ್ಯಾಂಕುಗಳಿಗೆ ತಳಕು ಹಾಕುವದಾಗಲಿ ಕಂಪನಿಗಳನ್ನು ಬ್ಯಾಂಕುಗಳು ತಮ್ಮ ಹತೋಟಿಯಲ್ಲಿ ಇಟ್ಟುಕೊಳ್ಳಲು ಯತ್ನಿಸುವದಾಗಲಿ ಸರಿಯಲ್ಲೆಂಬ ಮಾತು ನಿಜವಾಗಿದೆ. ಬ್ಯಾಂಕುಗಳು ಸುವ್ಯವಸ್ಥಿತವಾಗಿ ನಡೆದು ಆಡಳಿತದಲ್ಲಿ ಬಿಗುವನ್ನುಂಟುಮಾಡಿಕೊಳ್ಳುವದವಶ್ಯವೆಂದು ಹೇಳಿದ ಅವರ ಮಾತು ಸಮಂಜಸವಾಗಿದೆ.



ಸಂಪಾದಕೀಯ * * * * * * * *

# ಟೀಕೆ-ಟಿಪ್ಪಣೆಗಳು

## ಆಹಾರ ಮಂತ್ರಿಗಳ ಪರಿಷತ್ತು

ಕಳೆದ ವಾರ ದಿಲ್ಲಿಯಲ್ಲಿ ಸೇರಿದ್ದ ಆಹಾರ ಮಂತ್ರಿಗಳ ಪರಿಷತ್ತಿನಲ್ಲಿ ಕೇಂದ್ರ ಸರಕಾರದ ಆಹಾರ ಸಚಿವರಾದ ಸರ್ ರಾಬರ್ಟ ಹಚಿಂಗ್ಸರ ನಮ್ಮ ದೇಶದ ಆಹಾರ ಪರಿಸ್ಥಿತಿಯನ್ನು ವಿವರಿಸಿರುವರು. ನಮ್ಮ ದೇಶದ ಆಹಾರ ಪರಿಸ್ಥಿತಿಯು ಹದಗೆಟ್ಟಿರುವದೆಂಬ ಧ್ವನಿಯು ಅಲ್ಲಿ ಅಂಗೀಕೃತವಾದ ಗೊತ್ತುವಳಿಯಿಂದ ಹೊರಡುತ್ತದೆ. ಸಂಬಳ ತ ಸಲುವಾಗಿ ದುಡಿಯುತ್ತಿರುವ ಜೋಪಾಸನಾ ಸರಕಾರದವರಿಂದ ನಮ್ಮ ದೇಶದ ಆಹಾರ ಪರಿಸ್ಥಿತಿಯು ಸುಧಾರಿಸೀತೆಂದು ಆಶಿಸುವದು ಪದ್ಧತನವೇ ಸರಿ. ಯಾರ ಹೊಟ್ಟೆ ಕಡಿದರೆ ಯಾರು ಅಜವಾನ ತಿನ್ನುವರು? ಹಿಂದುಸ್ತಾನದಲ್ಲಿಯ ಮುಂರರಲ್ಲಿ ಎರಡಂಶ ಜನರಿಗೆ ಸೆರೆಮನೆಗಳಲ್ಲಿಯ ಸೆರೆಯಾಳುಗಳಿಗೆ ದೊರೆಯುವ ಆಹಾರ ಪ್ರಮಾಣಕ್ಕಿಂತಲೂ ಕಡಿಮೆ ಅನ್ನವು ದೊರೆಯುತ್ತಿದೆಯೆಂದು ೧೯೨೦ ರಲ್ಲಿಯೇ ಲೆಕ್ಕಹಾಕಿ ಅರ್ಥಶಾಸ್ತ್ರಜ್ಞರು ಸರಕಾರವನ್ನು ಆಹಾರದ ವಿಷಯದಲ್ಲಿ ಎಚ್ಚರಿಸಿದ್ದರು. ಆದರೆ ಕುಂಭಕರ್ಣನ ನಿದ್ದೆಯಲ್ಲಿದ್ದ ಹಿಂದುಸ್ತಾನ ಸರಕಾರವು ಅತ್ತ ಲಕ್ಷ್ಯಕೊಡಲಿಲ್ಲ. ಅವರು ನಿದ್ದೆಯಿಂದೇಳಲು ಬಂಗಾಲದ ೬೦ ಲಕ್ಷ ಜನರು ಉಪವಾಸವಾರಿಗೆ ಬಲಿಯಾಗಬೇಕಾಯ್ತು. ಹೀಗಿದ್ದರೂ ಹಿಂದುಸ್ತಾನ ಸರಕಾರದವರು ಹೊರ ದೇಶಗಳಿಂದ ಇಲ್ಲಿಗೆ ಆಹಾರ ಧಾನ್ಯವನ್ನು ತರಿಸಿಕೊಳ್ಳುವ ಕೆಲಸದಲ್ಲಿ ಸಾಕಷ್ಟು ತತ್ಪರರಾಗಿರುವದಿಲ್ಲ. ಕೇವಲ ಬಾಯಿಂದ ಆಹಾರ ಸಾಮುಗ್ರಿ ಹೆಚ್ಚಾಗಿ ಬರಬೇಕೆಂಬ ಬುಬ್ಬುಳಚಾರದ ಮಾತುಗಳನ್ನು ಮಾತ್ರ ಆಡುತ್ತಿರುವರು. ಆದರಿಂದ ಆಹಾರ ಪರಿಸ್ಥಿತಿ ಸುಧಾರಿಸಲಾರದು. ತಮ್ಮ ಮೇಲಿನ ಹೊಣೆಯನ್ನು ಕಡಿಮೆ ಮಾಡಿಕೊಳ್ಳಲು ಹಿಂದುಸ್ತಾನ ಸರಕಾರದವರು ಕೆಲ ದಿನಗಳ ಹಿಂದೆ ೪೦ ತೊಲಿಯ ಸೀದಾ ಪ್ರಮಾಣವನ್ನು ೩೦ ತೊಲಿಗೆ ಇಳಿಸಿವರು. ಅಂದಿನಿಂದ ನಮ್ಮ ದೇಶದ ಜನರು ಅರೆಹೊಟ್ಟೆ ಊಟ ಉಂಡು ಕಾಲಹರಣ ಮಾಡುತ್ತಿರುವರು. ಅದರೂ ನಮ್ಮ ದಯಾಳು ಸರಕಾರಕ್ಕೆ ಸಮಾಧಾನವಾದಂತೆ ತೋರಲೊಲ್ಲದು. ಯಾಕಂದರೆ ೩೦ ತೊಲಿಯ ಸೀದಾ ಪ್ರಮಾಣವನ್ನು ಇನ್ನೂ ಕಡಿಮೆ ಮಾಡುವ ಹೊಂಚನ್ನು ಹಚಿಂಗ್ಸರು ಹಾಕಿದ್ದಂತೆ ಅವರ ಸೂಚನೆಯನ್ನು ಪ್ರಾಂತಿಕ ಆಹಾರ ಮಂತ್ರಿಗಳು ವಿರೋಧಿಸಿ ಮಾಡಿದ ಗೊತ್ತುವಳಿಯಿಂದ ತಿಳಿದು ಬರುತ್ತದೆ. ಪ್ರಾಂತಿಕ ಆಹಾರ ಮಂತ್ರಿಗಳು ಹಿಂದುಸ್ತಾನ ಸರಕಾರದ ಆಹಾರ ಮಂತ್ರಿಗಳಿಗೆ ಒಳ್ಳೆಯ ಬುದ್ಧಿಯನ್ನು ಕಲಿಸಿದರೆಂದು ನಮಗೆ ಅನಿಸುತ್ತದೆ. ಮುಂದಿನ ಆರು ತಿಂಗಳುಗಳ ನಮ್ಮ ಆಹಾರ ಸಾಮುಗ್ರಿಯಲ್ಲಿ ೨೩ ಲಕ್ಷ ಟನ್ ಕೊರತೆಯಿದೆ. ಇಷ್ಟು ಆಹಾರವು ಹೊರಗಿನಿಂದ ಬರಬೇಕಾಗಿದೆ. ಅಂದರೆ ತಿಂಗಳಿಗೆ ೪ ಲಕ್ಷ ಟನ್ ಆಹಾರ ಸಾಮುಗ್ರಿ ಪರದೇಶಗಳಿಂದ ಬರದೆ ನಮ್ಮ ಜನ ಬದುಕಲಾರದು. ಅಂತರರಾಷ್ಟ್ರೀಯ ಆಹಾರ ಮಂಡಲದವರು ಹಿಂದುಸ್ತಾನಕ್ಕೆ ಮಲತಾಯಿಯ ಪ್ರೇಮವನ್ನು ತೋರುತ್ತಿರುವರೆಂಬ ಮಾತು ಅವರು ಯುರೋಪಿನಲ್ಲಿಯ ರಾಷ್ಟ್ರಗಳಿಗೆ ಆಹಾರ ಸಾಮುಗ್ರಿಯನ್ನು ಒದಗಿಸಿದ ಅಂಕಿ ಸಂಖ್ಯೆಗಳಿಂದ ಸಿದ್ಧವಾಗುತ್ತಿದೆ. ನಮ್ಮ ಜನರ ಬಗ್ಗೆ ಕಳಕಳಿಯುಳ್ಳ ಲೋಕ ಪ್ರತಿನಿಧಿ ಸರಕಾರವು ಕೇಂದ್ರದಲ್ಲಿ ಬರಬೇಕು. ಅಂದರೆ ಅಂತರರಾಷ್ಟ್ರೀಯ ಆಹಾರ ಮಂಡಲದಲ್ಲಿ ರಾಷ್ಟ್ರದ ನಿಜವಾದ ಪ್ರತಿನಿಧಿಗಳು ಹೋಗಿ ಅವರಿಂದ ಹೆಚ್ಚು ಆಹಾರ ಸಾಮುಗ್ರಿಯನ್ನೊದಗಿಸಿಕೊಂಡು ಬರಬಲ್ಲರು ಈ ದಾರಿಯನ್ನು ಬಿಟ್ಟು ಸರ್ ರಾಬರ್ಟರು ಜಾಗತಿಕ ಆಹಾರ ಮಂಡಲಕ್ಕೆ ಸರ್ ಜ್ವಾಲಾಪ್ರಸಾದರನ್ನು ಸರಕಾರದ ಪ್ರತಿನಿಧಿಗಳನ್ನಾಗಿ ಕಳಿಸಬೇಕೆಂದು ನಿಶ್ಚಯಿಸಿರುವದಂತೂ ಹುಣ್ಣಿನ ಮೇಲೆ ಬರೆಕೊಟ್ಟಂತೆ ಹಿಂದೀ ಜನತೆಗೆ ಅಸಹ್ಯ ಅಪಮಾನವಾಗಿದೆ. ಪ್ರಾಂತಿಕ ಆಹಾರ ಮಂತ್ರಿಗಳು ಲೋಕನಿಯುಕ್ತ ಪ್ರತಿನಿಧಿಗಳಾಗಿರುವದರಿಂದ ೩೦ ತೊಲಿಯ ಸೀದಾ ಪ್ರಮಾಣವನ್ನು ಇಳಿಸುವ ಸೂಚನೆಯನ್ನು ವಿರೋಧಿಸಿ ಜನತೆಯ ಹಿತದ ಬಗ್ಗೆ ತಮ್ಮ ದಕ್ಷತೆಯನ್ನು ತೋರಿರುವದು ಯೋಗ್ಯವಾಗಿದೆ. ಹಿಂದುಸ್ತಾನ ಸರಕಾರದ ಸೂತ್ರಗಳನ್ನು ರಾಷ್ಟ್ರೀಯ ಪ್ರಮುಖರಿಗೆ ಒಪ್ಪಿಸಿ ವೈಸರಾಯರು ಹದಗೆಡುತ್ತಿರುವ ಆಹಾರ ಪರಿಸ್ಥಿತಿಯನ್ನು ಸುಧಾರಿಸುವದೊಳಿತು.

## ನಿಚ್ಚಳ ನಿಲುಮೆ

ವರ್ಧಾದಲ್ಲಿ ಸೇರಿದ್ದ ಕಾಂಗ್ರೆಸ ಕಾರ್ಯಸಮಿತಿಯು ಬ್ರಿಟಿಷ ಘೋಷಣೆಯ ಸ್ವೀಕಾರವನ್ನು ಪುನರುಚ್ಚರಿಸಿ ಮುಸ್ಲಿಂ ಲೀಗಿನ ಸಂದೇಹ ಪಿಶಾಚವನ್ನು ತೊಲಗಿಸುವ ಯತ್ನವನ್ನು ಮಾಡಿದ್ದುದು ಯೋಗ್ಯವಾಗಿದೆ. ಕಾಂಗ್ರೆಸು ಮಂತ್ರಿತ್ರಯ ಯೋಜನೆಯ ಬಗೆಗೆ ತಾಳಿಟ್ಟುಕೊಂಡಿರುವ ಧೋರಣವನ್ನು ಸ್ಪಷ್ಟ ಹಾಗೂ ಅಸಂದಿಗ್ಧ ಮಾತುಗಳಲ್ಲಿ ಈಗ ವ್ಯಕ್ತಪಡಿಸಿರುವದರಿಂದ ನಿಜವಾಗಿ ಮುಸ್ಲಿಂಲೀಗಿನವರಿಗೆ ಕಾಂಗ್ರೆಸಿನ ಮೇಲೆ ಕಿರಿಹಾಯಲು ಯಾವ ಕಾರಣವೂ ಉಳಿದಿರುವದಿಲ್ಲ. ಪ್ರಾಂತಗಳ ಒತ್ತಾಯದ ಗುಂಪೀಕರಣ ಪ್ರಾಂತಿಕ ಸ್ವಾಯತ್ತತೆಗಳು ಪರಸ್ಪರ ವಿಸಂಗತವಾಗುವದರಿಂದ ಆ ವಿಸಂಗತಿಯ ಪರಿಹಾರವನ್ನು ಕಾಂಗ್ರೆಸು ಎಂದಿನಿಂದಲೂ ಅಪೇಕ್ಷಿಸುತ್ತಿದೆ. ಅದಕ್ಕಾಗಿ ಅದು ಮಂತ್ರಿತ್ರಯ ಯೋಜನೆಯಲ್ಲಿ ಹೇಳಿದ ಮಾರ್ಗವನ್ನೇ ಅನುಸರಿಸಲು ಸಿದ್ಧವಿದೆಯೆಂದು ಕಾರ್ಯ ಸಮಿತಿಯು ನಿಚ್ಚಳಪಡಿಸಿದೆ. ಜಿನ್ನಾಸಾಹೇಬರು ಟೀಕಿಸುವಂತೆ ಪಾಶವೀ ಬಹುಮತ ಪ್ರಯೋಗವನ್ನು ಈ ಕೆಲಸಕ್ಕಾಗಿ ಮಾಡುವ ಇಚ್ಛೆ ಕಾಂಗ್ರೆಸಿಗಿಲ್ಲೆಂದು ಖಂಡತುಂಡವಾಗಿ ಹೇಳಿ ತನ್ನ ನಿಲುಮೆಯ ಸಮಂಜಸತೆಯನ್ನು ಔಚಿತ್ಯವನ್ನು ಹೊರಹೊಮ್ಮಿಸಿದೆ. ಇದಕ್ಕಿಂತ ಹೆಚ್ಚಿನ ಸ್ಪಷ್ಟೀಕರಣವನ್ನು ಕಾಂಗ್ರೆಸಿನ ಭೂಮಿಕೆಯ ವಿಷಯದಲ್ಲಿ ಯಾರೂ ಕೊಡಲಾರರು. ಮುಸ್ಲಿಂ ಲೀಗಿನ ಅಧ್ಯಕ್ಷರು ಕಾಂಗ್ರೆಸಿನ ಧೋರಣವನ್ನು ಇನ್ನು ಕೂಡ ಟೀಕಿಸುತ್ತಿದ್ದರೆ ಅವರ ಉದ್ದೇಶವು ಕೇವಲ ಕಾಲುಕೆದರಿ ಜಗಳಕೆಗೆಜು ಬಳಗ ಹಾಕಿಕೊಳ್ಳುವದೇ ಆಗಿದೆಯೆಂದು ಯಾರಿಗಾದರೂ ಅನಿಸದಿರದು. ಕಾಂಗ್ರೆಸ ಕಾರ್ಯಸಮಿತಿಯು ಇತರ ಪಕ್ಷಗಳ ಸಂಶಯ ಪರಿಹಾರಕ್ಕಾಗಿ ತನ್ನ ಭೂಮಿಕೆಯನ್ನು ಮತ್ತೊಮ್ಮೆ ಸ್ಪಷ್ಟಪಡಿಸಿ ಪರಿಸ್ಥಿತಿಯನ್ನು ತಿಳಿಗೊಳಿಸಲು ಸಾಹಸಪಟ್ಟುದು ಸಮಂಜಸವೆಂದು ಹೇಳದಿರಲಾರೆವು. ಮುಸ್ಲಿಂ ಲೀಗಿನ ದುರಾಗ್ರಹ ವೃತ್ತಿಯನ್ನು ಲೆಕ್ಕಿಸದೆ ಅದರ ಸಹಕಾರದ ಅಪೇಕ್ಷೆಯಿಂದ ಕಾಂಗ್ರೆಸು ಒಂದು ಹೆಜ್ಜೆಯನ್ನು ಮುಂದಿಟ್ಟು ಸಹಕಾರ ಹಸ್ತವನ್ನು ಚಾಚಿರುವದು ಯೋಗ್ಯವೆಂದು ಬೇಕಾದವರು ಹೇಳಬಲ್ಲರು. ಹೀಗಿದ್ದರೂ ಕಾಂಗ್ರೆಸು ನೀಡಿದ ಸಹಕಾರ ಹಸ್ತವನ್ನು ಲೀಗು ಧಿಕ್ಕರಿಸಿದರೆ ಅದಕ್ಕೆ ಭಾರತೀಯ ಸ್ವಾತಂತ್ರ್ಯಕ್ಕಿಂತಲೂ ಬ್ರಿಟಿಷರ ದಾಸ್ಯವೇ ಬೇಕಾಗಿದೆಯೆಂದು ಮಾತ್ರ ಅರ್ಥವಾಗುವದು. ಮುಸ್ಲಿಂ ಲೀಗಿನ ಬಿಸಿಲ್ಗುದುರೆಯನ್ನು ಬೆನ್ನಟ್ಟಿ ಹೋಗುವದು ಇನ್ನು ಮುಂದೆ ಯಾರಿಂದಲೂ ಸಾಧ್ಯವಿಲ್ಲೆಂಬ ಮಾತನ್ನು ಕಾಂಗ್ರೆಸಿನ ಗೊತ್ತುವಳಿಯು ಸ್ಪಷ್ಟವಾಗಿ ಬಯಲಿಗೆಳೆದಿದೆಯೆಂದು ಹೇಳದಿರಲಾರೆವು.

## ವೈಸರಾಯರ ಬಿನ್ನಹ

ಕಾಂಗ್ರೆಸ ಕಾರ್ಯ ಸಮಿತಿಯು ತನ್ನ ಭೂಮಿಕೆಯನ್ನು ಸ್ಪಷ್ಟಪಡಿಸಿದ ಸಮಯದಲ್ಲಿಯೇ ವೈಸರಾಯರು ನಡುಗಾಲ ಸರಕಾರವನ್ನು ರಚಿಸುವ ಕೆಲಸದ ಎಳೆಗಳನ್ನು ಮತ್ತೆ ಕೈಯಲ್ಲಿ ತೆಗೆದುಕೊಂಡುದು ಶುಭಸೂಚಕವಾಗಿದೆ. ನಡುಗಾಲ ಸರಕಾರವನ್ನು ರಚಿಸುವ ಅವಶ್ಯಕತೆಯು ವಿಶೇಷವಾಗಿದೆಯೆಂಬ ವಿಷಯದಲ್ಲಿ ಬ್ರಿಟಿಷ ಸರಕಾರಕ್ಕೂ ವೈಸರಾಯರಿಗೂ ಬಹಳ ಆಸ್ಥೆಯಿರುವದೆಂಬ ಸಂಗತಿಯು ಇದರಿಂದ ನಿಚ್ಚಳವಾಗುತ್ತದೆ ಕಾಂಗ್ರೆಸ ಅಧ್ಯಕ್ಷರಾದ ಪಂಡಿತ ಜವಾಹರಲಾಲರಿಗೆ ವೈಸರಾಯರು ಈ ಬಗೆಗೆ ಆಮಂತ್ರಣವನ್ನು ಕಳಿಸಿದ್ದುದು ಯೋಗ್ಯವಾಗಿದೆ. ಕಾಂಗ್ರೆಸು ರಾಷ್ಟ್ರದ ಪ್ರಾತಿನಿಧಿಕ ಸಂಸ್ಥೆಯೆಂಬ ಮಾತು ಘಟನಾ ಸಮಿತಿಯ ಆಯ್ಕೆಯಲ್ಲಿ ಸಿದ್ಧವಾಗಿಬಿಟ್ಟಿದೆ. ದೇಶದಲ್ಲಿಯ ಎಲ್ಲ ಪಕ್ಷ ಪಂಗಡಗಳ ಪ್ರತಿನಿಧಿಗಳಿಗೂ ಪ್ರತಿನಿಧಿಗಳಿಗೂ ಕಾಂಗ್ರೆಸು ಇಂಬುಗೊಟ್ಟು ಕಾಂಗ್ರೆಸು ತನ್ನ ಔದಾರ್ಯವನ್ನು ವ್ಯಕ್ತಪಡಿಸಿದೆ. ಅಂದ ಬಳಿಕ ಇಂತಹ ಸಂಸ್ಥೆಯ ಪ್ರಾತಿನಿಧಿಕ ಸ್ವರೂಪವನ್ನು ! ವೈಸರಾಯರು ಮನಗಂಡು ಅದರ ಅಧ್ಯಕ್ಷರನ್ನು ನಡುಗಾಲ ಸರಕಾರ ರಚನೆಯ ಕುರಿತು, ಸೂಚನೆಗಳನ್ನು ಮಂಡಿಸಲು ಕರೆದುದು ಅಸಮಂಜಸವೆಂದು ಹೇಳುವದು ಹೇಗಾದೀತು? ಆದರೆ ವೈಸರಾಯರ ಆಮಂತ್ರಣವು ನಡುಗಾಲ ಸರಕಾರ ರಚನೆಗಾಗಿಯೇ ಎಂದಿದ್ದರೆ ಹೆಚ್ಚು ಉತ್ತಮವಾಗುತಿತ್ತಲ್ಲದೆ ಸಾಮ್ರಾಜ್ಯವಾದಿತ್ವದ ಅವಶೇಷವಾವುದೂ ಉಳಿದಿಲ್ಲವೆಂದು ಹೇಳಲು ಹೆಚ್ಚು ನೆರವಾಗುತ್ತಿತ್ತು. ಯಾವ ಕಾರಣದಿಂದಲೋ ಏನೋ ವೈಸರಾಯರು ಪಂಡಿತ ಜವಾಹರಲಾಲರನ್ನು ಕೇವಲ ನಡುಗಾಲ ಸರಕಾರ ರಚನೆಯ ಬಗೆಗೆ ಸೂಚನೆಗಳನ್ನು ಮಾಡಲು ಕರೆಸಿಕೊಂಡಿರುವರು. ಕಾಂಗ್ರೆಸ ಅಧ್ಯಕ್ಷರು ವೈಸರಾಯರ ಕಳಕಳಿಯನ್ನು ಪರೀಕ್ಷಿಸುವ ನಿಮಿತ್ತದಿಂದ ಅವರ ಆಮಂತ್ರಣವನ್ನು ಅಂಗೀಕರಿಸಿರುವದು ಯೋಗ್ಯವಾಗಿದೆ. ನಡುಗಾಲ ಸರಕಾರ ರಚನೆಯ ಹೊಣೆಯನ್ನು ವೈಸರಾಯರು ಕಾಂಗ್ರೆಸಿಗೆ ಒಪ್ಪಿಸಲು ಸಿದ್ಧರಿರುವರೋ ಅಥವಾ ಇಲ್ಲವೋ ಎಂಬ ಮಾತಿನ ಪರೀಕ್ಷೆಯು ಇನ್ನೂ ಆಗತಕ್ಕದ್ದಿದೆ. ಮಿ. ಬ್ರೇಲ್ಸಫೋರ್ಡರು ಸೂಚಿಸಿದಂತೆ ನಡುಗಾಲ ಸರಕಾರ ರಚನೆಯ ಹೊಣೆಯನ್ನು ವೈಸರಾಯರು ಕಾಂಗ್ರೆಸಿಗೆ ಒಪ್ಪಿಸುವದೊಳಿತೆಂದು ಸೂಚಿಸಬಯಸುತ್ತೇವೆ. ಇಲ್ಲದಿದ್ದರೆ ಹಿಂದೀಯರಿಗೆ ಅಧಿಕಾರವನ್ನೊಪ್ಪಿಸುವ ಮಾತುಗಳೆಲ್ಲ ಬ್ರಿಟಿಷ ಸರಕಾರದ ಪೊಳ್ಳು ಮಾತುಗಳೆಂದು ಹೇಳುವ ಪ್ರಸಂಗವು ಬರುವದು. ಮುಂದಿನ ವಾರದಲ್ಲಿ ಜರುಗುವ ಘಟನೆಗಳು ನಡುಗಾಲ ಸರಕಾರದ ಸಮಸ್ಯೆಯನ್ನು ಹೇಗೆ ಪರಿಹರಿಸುವವೋ, ನೋಡೋಣ.

## ವಿದ್ಯಾರ್ಥಿಗಳು ಮತ್ತು ರಾಜಕಾರಣ

ಪಂಡಿತ ಜವಾಹರಲಾಲರೂ ಆಚಾರ್ಯ ಕೃಪಲಾನಿಯವರೂ ಮೊನ್ನೆ ವರ್ಧಾ-ನಾಗಪುರಗಳಲ್ಲಿ ವಿದ್ಯಾರ್ಥಿಗಳನ್ನೂ ಯುವಕರನ್ನೂ ಉದ್ದೇಶಿಸಿ ಮಾಡಿದ ಭಾಷಣಗಳು ಬಹಳ ಮಾರ್ಮಿಕವಾಗಿವೆ. ದಾಸ್ಯ ಪಂಕದಲ್ಲಿ ಬಿದ್ದು ಕೊಳಲುತ್ತಿರುವ ದೇಶದಲ್ಲಿಯ ವಿದ್ಯಾರ್ಥಿಗಳಿಗೆ ರಾಜಕಾರಣದ ಸಂಪರ್ಕವುಂಟಾಗುವದು ಸ್ವಾಭಾವಿಕ. ಯಾಕಂದರೆ ಪರಕೀಯ ಸರಕಾರವು ಆ ರಾಷ್ಟ್ರದ ಇಡೀ ಜೀವನವನ್ನೇ ತನ್ನ ಅಂಕಿತದಲ್ಲಿಟ್ಟುಕೊಳ್ಳಲು ವಿಧವಿಧವಾದ ಯುಕ್ತಿಪ್ರಯುಕ್ತಿಗಳನ್ನು ಮಾಡಿರುವದರಿಂದ ಅದರ ಝಳವು ನಾಗರಿಕರಿಗೆಲ್ಲ ತಾಕದೆ ಹೋಗದು. ವಿದ್ಯಾರ್ಥಿ ಜೀವನದಲ್ಲಿಯೂ ಪರಕೀಯ ಸರಕಾರದ ಹಸ್ತಕ್ಷೇಪವು ಕಂಡುಬಂದ ಕೂಡಲೆ ಅದನ್ನು ಪ್ರತಿಭಟಿಸುವ ಸಲುವಾಗಿ ಅವರು ರಾಜಕಾರಣದಲ್ಲಿ ಆಸ್ಥೆಯನ್ನು ವಹಿಸಬೇಕಾಗುವದು. ಪಂಡಿತ ಜವಾಹರಲಾಲರು ವಿದ್ಯಾರ್ಥಿಗಳ ಈ ಪರಿಸ್ಥಿತಿಯನ್ನು ಪೂರ್ಣ ಬಲ್ಲವರಾದುದರಿಂದಲೇ ರಾಜಕಾರಣದಲ್ಲಿ ಆಸ್ಥೆ ವಹಿಸುವದು ಅಪರಿಹಾರ್ಯವೆಂದು ಒಪ್ಪಿಕೊಂಡಿರುವರು. ರಾಜಕಾರಣದಲ್ಲಿ ಆಸಕ್ತಿಯನ್ನು ವಹಿಸುವದೆಂದರೆ ಮುಂದಾಳುತನದ ಹೊಣೆಯನ್ನೇ ಹೊತ್ತುಕೊಳ್ಳುವದೆಂದಲ್ಲೆಂದು ಪಂಡಿತರು ವಿದ್ಯಾರ್ಥಿಗಳಲ್ಲಿ ಸಮಂಜಸವಾದ ಒಂದು ಎಚ್ಚರಿಕೆಯನ್ನು ಕೊಟ್ಟಿರುವದನ್ನು ಎಲ್ಲ ವಿದ್ಯಾರ್ಥಿಗಳೂ ನೆನಪಿಡಬೇಕು. ಯಾಕಂದರೆ ಇತ್ತೀಚೆಗೆ ವಿದ್ಯಾರ್ಥಿಗಳು ರಾಷ್ಟ್ರಪತಿಗಳು ಹೊರಡಿಸಿದ ಆಜ್ಞೆಗಳನ್ನು ಮೀರಿ ಮನಬಂದಂತೆ ಕುಣಿಯುವ ಪ್ರವೃತ್ತಿಯು ಬೆಳೆಯುತೊಡಗಿದೆ. ರಾಷ್ಟ್ರದ ಮುಂದಾಳುತನವನ್ನೇ ಹೊತ್ತುಕೊಂಡವರಂತೆ ಸ್ವತಂತ್ರ ರೀತಿಯಿಂದ ಆಜ್ಞೆ-ಆದೇಶಗಳನ್ನು ಹೊರಡಿಸಿ ಪ್ರತ್ಯೇಕ ಕಾರ್ಯಕ್ರಮವನ್ನು ರೂಪಿಸಿಕೊಳ್ಳುವದು ವಿದ್ಯಾರ್ಥಿಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಇದು ಹಿರಣದ ದೃಷ್ಟಿಯಿಂದ ಯೋಗ್ಯವಾಗಲಾರದು. ವೇಲಾಗಿ ವಿದ್ಯಾರ್ಥಿಗಳ ಶಕ್ತಿಯು ನಿಸರ್ಗತಃ ಪರಿಮಿತವಾಗಿರುವದರಿಂದ


—೧೩ನೇ ಪುಟಕ್ಕೆ

# ನಡುಗಾಲ ಸರಕಾರ ಸ್ಥಾಪಿಸಲು ಕಾಂಗ್ರೆಸ್ಸಿಗೆ ಆಮಂತ್ರಣ

ಹಿಂದುಸ್ಥಾನದ ರಾಜಕೀಯ ಆಕಾಶದಲ್ಲಿ ಹೊಸ ಆಶಾಕಿರಣಗಳನ್ನು ಹಬ್ಬಿಸಿದ ಘಟನೆಯೊಂದು ಈ ವಾರ ಜರಗಿತು. ವರ್ಧಾದಲ್ಲಿ ಕಾಂಗ್ರೆಸ್ ಕಾರ್ಯ ಸಮಿತಿಯ ಸಭೆ ಜರುಗಿರುವಾಗಲೇ ತಾ. ೧೨ ಕ್ಕೆ ವೈಸರಾಯ ಭವನದಿಂದ ಪ್ರಕಟನೆಯೊಂದು "ವೈಸರಾಯರು, ಬ್ರಿಟಿಶ ಸರಕಾರದ ಒಪ್ಪಿಗೆ ಪಡೆದು, ನಡುಗಾಲ ಸರಕಾರವನ್ನು ಕೂಡಲೆ ಸ್ಥಾಪಿಸುವ ವಿಷಯದಲ್ಲಿ ಸೂಚನೆಗಳನ್ನು ಮಾಡಲು ಕಾಂಗ್ರೆಸ್ಸಿನ ಅಧ್ಯಕ್ಷರನ್ನು ಆಮಂತ್ರಿಸಿದ್ದಾರೆ: ಮತ್ತು ಕಾಂಗ್ರೆಸ್ ಅಧ್ಯಕ್ಷರು ಈ ಆಮಂತ್ರಣವನ್ನು ಸ್ವೀಕರಿಸಿದ್ದಾರೆ" ಎಂದು ಚುಟುಕಾಗಿದ್ದರೂ ಮಹತ್ತರವಾದ ಅರ್ಥವನ್ನೊಳಗೊಂಡು ಹೊರಬಿತ್ತು. ಎಷ್ಟೋ ದಿನಗಳ ಚಿಂತೆ-ಭೀತಿಗಳ ನಂತರ ಬ್ರಿಟಿಶ ಸರಕಾರ ಈ ಪ್ರಕಾರ ಸರಿಯಾದ ದಾರಿಯಲ್ಲಿ ಅತ್ಯಂತ ಮಹತ್ವದ ಹೆಜ್ಜೆಯನ್ನಿಟ್ಟಿತು. ಹಿಂದುಸ್ಥಾನದ ಪರಿಸ್ಥಿತಿಯನ್ನು ಪೂರ್ಣವಾಗಿ ಪರಿಶೀಲಿಸಿದ ಎಷ್ಟೋ ಲೇಖಕರು ಸಾಮಾನ್ಯ ಪ್ರಜಾತಂತ್ರಾತ್ಮಕ ರೂಢಿಯನ್ನು ಅನುಸರಿಸಿ ಬಹುಸಂಖ್ಯಾಕ ಪಕ್ಷವನ್ನು ಸರಕಾರದ ರಚನೆ ಮಾಡಲು ಕರೆಯುವದೊಂದೇ ಶರಣೋಪಾಯವೆಂದು ಬ್ರಿಟಿಶ ಸರಕಾರಕ್ಕೆ ಸಲಹೆ ಕೊಟ್ಟಿದ್ದರು. ಕೂಲಿಕಾರ ಸರಕಾರದ ಪರವಾಗಿ ಮುಖ್ಯಮಂತ್ರಿ ಅಟ್ಲಿಯವರು ಹಿಂದುಸ್ಥಾನವನ್ನು ಕುರಿತು ಕೊಟ್ಟ ಮೊದಲ ಹೇಳಿಕೆಯಲ್ಲೆ ಅಲ್ಪಸಂಖ್ಯಾಕರ ಹಿತರಕ್ಷಣೆಯಾಗಬೇಕೆಂದು ಸರಕಾರದ ಅಪಾರ ವಿದ್ದರೂ ಯಾವುದೇ ಅಲ್ಪಸಂಖ್ಯಾಕ ಗುಂಪಿಗೆ ಇಡಿ ಹಿಂದುಸ್ಥಾನದ ಪ್ರಗತಿಯನ್ನು ತಡೆಯುವ ಹಕ್ಕನ್ನು ಕೊಡಲಾರೆವೆಂದು ಎಚ್ಚರಿಕೆ ಕೊಟ್ಟದ್ದನ್ನೂ ಇಲ್ಲಿ ನೆನೆದುಕೊಳ್ಳಬಹುದು. ಈ ಆಶ್ವಾಸನವನ್ನು ಅನುಸರಿಸಿಯೆ ಈಗ ಬ್ರಿಟಿಶ ಸರಕಾರ ಮುಸ್ಲಿಂ ಲೀಗಿನ ಅಸಹಕಾರದ ಏಳೆ, ಪ್ರತ್ಯಕ್ಷ ಹೋರಾಟದ ಬೆದರಿಕೆಯನ್ನು ಕೂಡ ಗಮನಿಸದೆ ಕಾಂಗ್ರೆಸ್ಸಿನ ಕೈಯಲ್ಲಿ ಅಧಿಕಾರ ಸೂತ್ರವನ್ನು ಒಪ್ಪಿಸಲು ಸಿದ್ಧವಾದಂತೆ ತೋರುತ್ತದೆ. "ಸೂಚನೆಗಳನ್ನು ಮಾಡಲು" ಎಂಬ ಶಬ್ದಗುಚ್ಛದಲ್ಲಿ ದುಷ್ಟ ಹೇತುವೇನೂ ಇಲ್ಲದಿದ್ದ ಪಕ್ಷದಲ್ಲಿ ಕಾಂಗ್ರೆಸ್ಸು ಮಾಡಿದ ಸೂಚನೆಗಳನ್ನು ಬ್ರಿಟಿಶರು ಒಪ್ಪಿಕೊಳ್ಳಬಹುದು. ಮತ್ತು ನಡುಗಾಲ ಸರಕಾರ ಬಹಳ ಬೇಗನೆ ಅಸ್ತಿತ್ವದಲ್ಲಿ ಬರಬಹುದು. ಅಗಸ್ಟ ೨೦ ಕ್ಕೇ ಅದು ಸೂತ್ರಗಳನ್ನು ಕೈಕೊಳ್ಳಬಹುದೆಂದು ಕಾಂಗ್ರೆಸ ಕಾರ್ಯದರ್ಶಿಗಳು ಹೇಳಿದ್ದಾರೆ. ಕಾಂಗ್ರೆಸ್ ಅಧ್ಯಕ್ಷರು ಈ ಲೇಖ ಓದುಗರ ಕೈಸೇರುವಷ್ಟರಲ್ಲಿಯೇ ದಿಲ್ಲಿಗೆ ಹೋಗಿ ವಾಯಿಸರಾಯರನ್ನು ಕಂಡು ಮಾತಾಡುವರು.

## ಕಾರ್ಯ ಸಮಿತಿಯ ಗೊತ್ತುವಳಿ

ವಾಯಿಸರಾಯರು ಕಾಂಗ್ರೆಸ್ ಮುಂದಾಳುಗಳೊಡನೆ ಚರ್ಚೆ ನಡೆಸಿ ಈ ಮಾರ್ಗವನ್ನು ಅನುಸರಿಸುವ ನಿರ್ಣಯವನ್ನು ಮೊದಲೇ ಮಾಡಿದಂತೆ ತೋರುತ್ತದೆ. ಮುಸ್ಲಿಂ ಲೀಗಿನ ಅಕಸ್ಮಾತ್ ರೋಷದಿಂದ ಅವರ ನಿರ್ಣಯವೇನೂ ಬದಲಾಗಲಿಲ್ಲ. ಆದರೆ ಅ. ಭಾ. ಕಾಂಗ್ರೆಸ್ ಸಮಿತಿಯಲ್ಲಿಯೂ ಅದರ ನಂತರವೂ ಕೆಲ ಪ್ರಮುಖ ಕಾಂಗ್ರೆಸ್ಸಿಗರು ಮುಖ್ಯವಾಗಿ ಪಂಡಿತ ಜವಾಹರಲಾಲರು ಕೊಟ್ಟ ಹೇಳಿಕೆಗಳಿಂದ ಮುಸ್ಲಿಂ ಲೀಗಿಗೆ ಆಕ್ಷೇಪನೆತ್ತಲು ಒಂದು ನೆವ ದೊರೆತಂತಾಗಿತ್ತು. ಕಾಂಗ್ರೆಸ್ಸು ಘಟನಾ ಸಮಿತಿಯನ್ನು ವಿಧಾಯಕ ಮನೋಭಾವದಿಂದ ಪ್ರವೇಶಿಸುತ್ತ ಇಲ್ಲ ಎಂಬ ಸಂದೇಹಕ್ಕೆ ಅದು ಎಡೆಮಾಡಿಕೊಟ್ಟಿತೆಂದು ಕೆಲ ನಿಷ್ಪಕ್ಷಪಾತಿಗಳು ಕೂಡ ಹೇಳಿದ್ದರು. ಇದರಿಂದ ಈ ವಿಷಯದಲ್ಲಿ ತನ್ನ ಸದುದ್ದೇಶವನ್ನು ಸೂಚಿಸಿ ಕಾಂಗ್ರೆಸ ಕಾರ್ಯ ಸಮಿತಿ ಗೊತ್ತುವಳಿಯನ್ನು ಮಾಡುವದು ಅವಶ್ಯವೆಂದು ವಾಯಿಸರಾಯರು ಭಾವಿಸಿರಬಹುದು. ಕಾಂಗ್ರೆಸ್ ಕಾರ್ಯ ಸಮಿತಿ ಆ ಗೊತ್ತುವಳಿಯನ್ನು ತಾ. ೧೦ ಕ್ಕೆ ವರ್ಧಾದಲ್ಲಿ ಸ್ವೀಕರಿಸಿದೊಡನೆ ವಾಯಿಸರಾಯರು ಅದಕ್ಕೆ ಆಮಂತ್ರಣ ಕಳಿಸಿರಬೇಕು.

ಕಾರ್ಯ ಸಮಿತಿಯ ಗೊತ್ತುವಳಿಯ ಹೊಣೆಯರಿತ ನ್ಯಾಯಶೀಲಬಗೆ ತಕ್ಕಂತಿತ್ತು. ಬ್ರಿಟಿಶ ಮಂತ್ರಿ ರಾಯಭಾರದ ಯೋಜನೆಗೆ ಮೊದಲು

## ಬ್ರಿಟಿಶ ಸರಕಾರದ ದಿಟ್ಟತನದ ಮುಂದಡಿ— ಸರಕಾರದಲ್ಲಿ ಸಹಕರಿಸಲು ಜಿನ್ನಾರಿಗೆ ಕಾಂಗ್ರೆಸಿನ ಆಮಂತ್ರಣ — ಲೀಗು ಮುಂದೇನು ಮಾಡುವದು ?

ಒಪ್ಪಿದ್ದ ಮುಸ್ಲಿಂ ಲೀಗು ಆ ಮೇಲೆ ಅದನ್ನು ತಿರಸ್ಕರಿಸಿದ್ದಕ್ಕೆ ಅದು ವಿಷಾದ ಪ್ರದರ್ಶಿಸಿ, ಕಾಂಗ್ರೆಸ್ ಮತ್ತು ಲೀಗ್ ಧ್ಯೇಯ ಧೋರಣೆಗಳಲ್ಲಿ ಭೇದವಿದ್ದರೂ ಸಂಪೂರ್ಣ ಸ್ವಾತಂತ್ರ್ಯ ಸಿಗುವ ಈ ಸಂಕ್ರಾಂತಿ ಕಾಲದಲ್ಲಿ ಮಹತ್ವದ ರಾಜಕೀಯ ಮತ್ತು ಆರ್ಥಿಕ ಸಮಸ್ಯೆಗಳನ್ನೆದುರಿಸಬೇಕಾಗಿರುವಾಗ ಭಾರತೀಯರೆಲ್ಲರ ಪರಮಾವಧಿ ಸಹಕಾರ ಅವಶ್ಯವಿರುವದರಿಂದ ಸಕಲ ಭಾರತೀಯರ ಹಿತದೃಷ್ಟಿಯಿಂದ ಮುಸ್ಲಿಂಲೀಗು ಈ ಮಹತ್ಕಾರ್ಯದಲ್ಲಿ ಸಹಕರಿಸಬೇಕೆಂದು ಬಾಯಿಬಿಚ್ಚಿ ಪ್ರಾರ್ಥಿಸಿಕೊಂಡಿದೆ. ರಾಯಭಾರದ ಯೋಜನೆಯಲ್ಲಿರುವ ಎಲ್ಲ ಅಂಶಗಳೂ ಕಾಂಗ್ರೆಸಿಗೆ ಸಮ್ಮತವಲ್ಲದಿದ್ದರೂ ಇಡೀ ಯೋಜನೆಯನ್ನು ಅದು ಇದ್ದಕ್ಕಿದ್ದಂತೆ ಅಂಗೀಕರಿಸಿದೆಯೆಂದೂ ಪ್ರಾಂತಿಕ ಗುಂಪುಗಳನ್ನು ರಚಿಸುವ ವಿಷಯದಲ್ಲಿ ಘೋಷಣೆಗೆ ಕಾಂಗ್ರೆಸ್ಸು ಹಚ್ಚಿರುವ ಅರ್ಥದ ಸರಿತಪ್ಪನ್ನು ಕೂಡ ಘೋಷಣೆಯಲ್ಲಿ ಹೇಳಿರುವ ನಿಯಮಗಳನ್ನನುಸರಿಸಿಯೆ ನಿರ್ಣಯಿಸಬಹುದೆಂದೂ ಈ ಗೊತ್ತುವಳಿ ಒಪ್ಪಿಕೊಂಡಿದೆ. ಘಟನಾಸಮಿತಿಯ ಸಾರ್ವಭೌಮತ್ವವನ್ನು ಅದು ಪುನಃ ಒತ್ತಿ ಹೇಳಿದ್ದರೂ ಅದು ತನ್ನ ನಿರ್ದಿಷ್ಟ ಕಾರ್ಯಪರಿಧಿಯಲ್ಲಿಯೆ ಕೆಲಸ ಸಾಗಿಸುವದೆಂದೂ ನ್ಯಾಯವಾದ ಎಲ್ಲ ಹಕ್ಕು ಬಾಧ್ಯತೆಗಳಿಗೆ ಸಂರಕ್ಷಣೆಯನ್ನು ಕೊಟ್ಟು ರಾಜ್ಯಘಟನೆಯನ್ನು ಕೊಟ್ಟು ರಾಜ್ಯಘಟನೆಯನ್ನು ತಯಾರಿಸುವ ಕಾರ್ಯವನ್ನು ಯಶಸ್ವಿಯಾಗಿ ಮಾಡಿ ತೋರಿಸುವ ಉದ್ದೇಶದಿಂದಲೇ ಕಾಂಗ್ರೆಸ್ಸು ಘಟನಾ ಸಮಿತಿಯಲ್ಲಿ ಸೇರಿದೆಯೆಂದೂ ಸ್ಪಷ್ಟೀಕರಿಸಿದೆ.

### ಜಿನ್ನಾರಿಗೆ ತೃಪ್ತಿಯಿಲ್ಲ

ಮುಸ್ಲಿಂಲೀಗು ತನ್ನ ಒಪ್ಪಿಗೆಯನ್ನು ಹಿಂತೆಗೆದುಕೊಂಡೊಡನೆಯೆ ಲೀಗ್ ಅಧ್ಯಕ್ಷರಾದ ಜಿನ್ನಾ ಸಾಹೇಬರು "ಮುಂದಿನ ಹೆಜ್ಜೆಯನ್ನಿಡುವ ಭಾರ ಕಾಂಗ್ರೆಸ್ ಮತ್ತು ಬ್ರಿಟಿಶ ಸರಕಾರಕ್ಕೆ ಸೇರಿದ್ದು" ಎಂದು ಹೇಳಿದ್ದರು. ಆ ಪ್ರಕಾರ ಕಾಂಗ್ರೆಸ್ಸು ಲೀಗಿನೊಡನೆ ನೇರವಾಗಿ ಸಹಕಾರವನ್ನು ಯಾಚಿಸಿ ತನ್ನ ಕರ್ತವ್ಯ ಮಾಡಿದೆ. ಸರ್ ಚಿಮನಲಾಲ ಸೆಟ್ಲವಾಡರಂಥ ನಿಷ್ಪಕ್ಷಪಾತಿಗಳು ಕೂಡ ಕಾಂಗ್ರೆಸ್ಸಿನ ಈ ಗೊತ್ತುವಳಿಯಿಂದ ಲೀಗು ವ್ಯಕ್ತಗೊಳಿಸಿದ ಶಂಕೆಗಳಿಗೆಲ್ಲ ಸಮಾಧಾನ ಸಿಕ್ಕಿದಂತಾಗಿದೆಯೆಂದು ಒಪ್ಪಿಕೊಂಡಿದ್ದಾರೆ. ಕಾಂಗ್ರೆಸ್ಸು ದೀರ್ಘಾವಧಿ ಯೋಜನೆಯನ್ನು ಶರ್ತುಹಾಕಿ ಒಪ್ಪಿದ್ದರಿಂದ ಒಪ್ಪಿದಂತಾಗೇ ಇಲ್ಲವೆಂದು ಲೀಗಿನ ಮೊದಲ ಆಕ್ಷೇಪವಾಗಿತ್ತು. ಆದರೀಗ ಕಾಂಗ್ರೆಸ್ಸು ತಾನು ಇಡಿ ಯೋಜನೆಯನ್ನು ಇದ್ದಕ್ಕಿದ್ದಂತೆ ಒಪ್ಪಿಕೊಂಡಿರುವದಾಗಿ ಸ್ಪಷ್ಟೀಕರಿಸಿದೆ. ಇನ್ನೊಂದು ಲೀಗ್ ಆಕ್ಷೇಪವೆಂದರೆ, ಕಾಂಗ್ರೆಸ್ಸು ಗುಂಪುಗಳ ರಚನೆಯನ್ನು ಕುರಿತು ಮಾಡಿದ ಅರ್ಥದ ಕುರಿತು. ಗುಂಪುಗಳಲ್ಲಿ ಸೇರುವ ಬಿಡುವ ಅಧಿಕಾರ ಪ್ರಾಂತಗಳದೆಂಬ ವಾದಕ್ಕೆ ಕಾಂಗ್ರೆಸ್ಸು ಇನ್ನೂ ಅಂಟಿಕೊಂಡಿದ್ದರೂ ಈ ವಿಷಯದಲ್ಲಿ ಘೋಷಣೆಯ ನಿಯಮಗಳನ್ನು ಅನುಸರಿಸಿಯೆ ಅರ್ಥವನ್ನು ನಿರ್ಧರಿಸಲು ಸಮ್ಮತಿಸಿ ತಾನು ಸ್ವೇಚ್ಛೆಯಿಂದ ಯಾವುದನ್ನೂ ನಿರ್ಧರಿಸುವದಿಲ್ಲವೆಂದು ಆಶ್ವಾಸನ ಕೊಟ್ಟಂತಾಗಿದೆ. ಮೂರನೆಯದಾಗಿ ಘಟನಾ ಸಮಿತಿ ಸಾರ್ವಭೌಮವೆಂದು ಹೇಳಿ ಕಾಂಗ್ರೆಸ್ಸು ತನ್ನ "ಪಾಶವ ಸಂಖ್ಯಾಬಲ"ದಿಂದ ಇತರರ ಅಭಿಪ್ರಾಯವನ್ನು ಧಿಕ್ಕರಿಸುವದೆಂದು ಜಿನ್ನಾರು ಶಂಕಿಸಿದ್ದರು: ಘಟನಾ ಸಮಿತಿಯ ಸಾರ್ವಭೌಮತ್ವವನ್ನು ಕಾಂಗ್ರೆಸ್ಸು ಈ ಗೊತ್ತುವಳಿಯಲ್ಲಿಯೂ ಒತ್ತಿಹೇಳಿದ್ದರೂ ಸಮಿತಿಗೆ ಗೊತ್ತುಪಡಿಸಿದ ಕಾರ್ಯದ ಪರಿಧಿಯಲ್ಲೆ ಅದು ಕೆಲಸ ನಡೆಸುವದೆಂದು ಸಾರಿ ಈ ಶಂಕೆಯನ್ನೂ ಸಮಾಧಾನಗೊಳಿಸಿದೆ. ಈ ಪ್ರಕಾರ ಕಾಂಗ್ರೆಸ್ಸಿನ ಮೇಲೆ ಜಿನ್ನಾ ಸಾಹೇಬರು ಎತ್ತಿದ್ದ ಆಕ್ಷೇಪಗಳಿಗೆಲ್ಲ, ಅವರ ಅತ್ಯಂತ ಉತ್ತೇಜಕ ಭಾಷೆಯನ್ನು ಕೂಡ ಗಮನಿಸದೆ, ನಮ್ರತೆಯಿಂದ ಸಮಾಧಾನ ಹೇಳಿದ್ದರೂ ಜಿನ್ನಾ ಸಾಹೇಬರಿಗೆ ಸಂತುಷ್ಟಿಯಾಗಿಲ್ಲ. ಅವರು ಮತ್ತೆ "ಕಾಂಗ್ರೆಸ್ಸಿನ ಪಾಶವ ಸಂಖ್ಯಾಬಲ"ದ ಪಲ್ಲವಿಯನ್ನೇ ಹಾಡುತ್ತ, ಕಾಂಗ್ರೆಸ್ಸಿನ ನಿರ್ಣಯದಿಂದ ಪರಿಸ್ಥಿತಿ ಬದಲಾಗಿಲ್ಲವೆಂದೇ ಸಾಧಿಸುತ್ತಿದ್ದಾರೆ. ಆದರೆ ಕಾಂಗ್ರೆಸ್ ಗೊತ್ತುವಳಿ ನ್ಯಾಯವಾದ ಆಕ್ಷೇಪಗಳನ್ನೆಲ್ಲ ಸಮಾಧಾನಪಡಿಸಿದೆಯೆಂದು ವಾಯಿಸರಾಯರಿಗೆ ಮನವರಿಕೆಯಾದುದರಿಂದಲೇ ಅವರು ಮುಂದಿನ ಹೆಜ್ಜೆಯಿಟ್ಟಿರಬಹುದಲ್ಲವೆ?

### ಸಹಕಾರ ಹಸ್ತ

ಜಿನ್ನಾರ ಈ ಹಟವನ್ನು ಕಂಡು ಎದೆಗುಂದದೆ ಕಾಂಗ್ರೆಸ್ ಅಧ್ಯಕ್ಷ ನೆಹರೂ ಅವರು ನಡುಗಾಲ ಸರಕಾರದ ರಚನೆಯಲ್ಲಿ ಲೀಗ್ ಸಹಕಾರವನ್ನು ಅಪೇಕ್ಷಿಸಿ ಪುನಃ ಅವರಿಗೆ ಪತ್ರ ಬರೆದಿದ್ದಾರೆ. ಮುಂಬಯಿಯಲ್ಲಿ ಜಿನ್ನಾ ಅವರನ್ನು ಕಂಡೇ ಕಾಂಗ್ರೆಸ್ ಅಧ್ಯಕ್ಷರು ದಿಲ್ಲಿಗೆ ಹೋಗಿ ವಾಯಿಸರಾಯರೊಡನೆ ಮಾತುಕತೆ ಕಡೆಗಾಣಿಸುವರು. ನಡುಗಾಲ ಸರಕಾರದಲ್ಲಿ ಲೀಗಿಗೆ ಉದಾರವಾದ ಭಾಗವನ್ನು ಕೊಡಲು ಕಾಂಗ್ರೆಸ್ಸು ಒಪ್ಪಿದೆಯೆಂದು ಗೊತ್ತಾಗಿದೆ. ವಾಯಿಸರಾಯರ ನಡುಗಾಲ ಸರಕಾರ ಯೋಜನೆಯಲ್ಲಿದ್ದಂತೆ ಕಾಂಗ್ರೆಸ್ ೬, ಲೀಗ್ ೫ ಮತ್ತು ಇತರ ೩ ಈ ಪ್ರಮಾಣವನ್ನು ಕಾಯ್ದುಕೊಂಡು ಹೋಗುವದೇ ಕಾಂಗ್ರೆಸ್ಸಿನ ಉದ್ದೇಶವಿದೆಯೆಂದೂ ಈಗಾಗಲೆ ತನ್ನ ಪರವಾಗಿ ತಾನು ಸೂಚಿಸಿರುವ ಹೆಸರುಗಳಲ್ಲಿ ಬದಲಾವಣೆಯನ್ನು ಕಾಂಗ್ರೆಸ್ಸು ಮಾಡುವದಿಲ್ಲವೆಂದೂ ಹೇಳಲಾಗಿದೆ. ಲೀಗಿಗೆ ಕೊಡಲಾದ ೫ ಸ್ಥಾನಗಳಿಗೆ ಜಿನ್ನಾಸಾಹೇಬರು ಬೇಕಾದವರನ್ನು ಆರಿಸಬಹುದು. ಕಾಂಗ್ರೆಸ್ ಅಧ್ಯಕ್ಷರು ನೇರವಾಗಿ ಜಿನ್ನಾರನ್ನು ಸಮೀಪಿಸಿರುವರಲ್ಲದೆ ಹಿಂದಿನ ಅಧ್ಯಕ್ಷ ಅಜಾದರಾದರೂ ಲೀಗು ತನ್ನ ನಿರ್ಣಯವನ್ನು ಪುನರ್ವಿಮರ್ಶಿಸಬೇಕೆಂದು ಕೇಳಿಕೊಂಡಿದ್ದಾರೆ. ಜಿನ್ನಾ ಸಾಹೇಬರು ಈಗಾದರೂ ದೇಶದ ವಿಶಾಲ ಹಿತವನ್ನು ಚಿಂತಿಸಿ ಚಿಲ್ಲರೆ ಮತಭೇದಗಳನ್ನು ಬದಿಗಿರಿಸಿ ಸಹಕರಿಸಲು ಸಿದ್ಧರಾಗುವರೋ ಅಥವಾ ಕೇಂದ್ರಕ್ಕೆ ಮುಸ್ಲಿಮ ಮಂತ್ರಿಗಳನ್ನು ನೇಮಿಸುವ ಸರ್ವಾಧಿಕಾರವನ್ನು ಬೇಡಿ ಹಟ ಮಾರಿತನ ಮಾಡುವರೋ ನೋಡಬೇಕು. ಲೀಗಿಗೆ ಸರಕಾರ ರಚಿಸುವ ಅವಕಾಶವೀಯದೆ, ನಡುಗಾಲ ಯೋಜನೆಯನ್ನು ತಿರಸ್ಕರಿಸಿದ ಕಾಂಗ್ರೆಸ್ಸಿಗೆ ಆ ಕೆಲಸವನ್ನೊಪ್ಪಿಸಿದ್ದು ಲೀಗಿಗೆ ಅವಮಾನ ಮಾಡಿದಂತೆ ಎಂದು ಅವರು ಬಗೆಯುವರೊ ಏನೋ. ಆದರೆ ಲೀಗು ಕೇಂದ್ರದಲ್ಲಿ ಮಂತ್ರಿಮಂಡಲ ರಚಿಸಿದ್ದರೂ ಕಾಂಗ್ರೆಸ್ಸಿನ ಸಹಕಾರವಿಲ್ಲದಿದ್ದರೆ ಅವರ ಮಂತ್ರಿಮಂಡಲಕ್ಕೆ ಕೇಂದ್ರಶಾಸನ ಸಭೆಯಲ್ಲಿ ಬಹುಮತ ಸಿಗುವದು ಅಸಾಧ್ಯವಾಗಿತ್ತೆಂದೂ ಅದು ಸಿಗದಿದ್ದ ಮೇಲೆ ಅವರ ಸರಕಾರ ಹಿಂದಿನ ಕಾರ್ಯಕಾರೀ ಮಂಡಲಕ್ಕಿಂತ ಮೇಲ್ತರಗತಿಯದಾಗುತಿದ್ದಿಲ್ಲವೆಂದೂ ಅವರು ನೆನೆದುಕೊಳ್ಳಬೇಕಾಗಿದೆ.

### ಲೀಗ ಒಲ್ಲೆಂದರೂ ಕೆಲಸ ನಿಲ್ಲದು

ಒಂದು ವೇಳೆ ಲೀಗು ತನ್ನ ಗಡುಸುತನ ಬಿಡದೆ ಹೋದರೂ ಕಾಂಗ್ರೆಸ್ಸು ಹೆದರಿ ನಡಗಾಲ ಸರಕಾರದ ರಚನೆಯ ಕೈಬಿಡುವದಿಲ್ಲವೆಂದು ಅ. ಭಾ. ಕಾಂಗ್ರೆಸ್ ಕಾರ್ಯದರ್ಶಿ ಡಾ. ಕೇಸಕರರು ಸ್ಪಷ್ಟೀಕರಿಸಿದ್ದಾರೆ. ಲೀಗು ಒಲ್ಲೆಂದರೆ ಆಗ ಬೇರೆ ವಿಧಾನವನ್ನು ಯೋಚಿಸಿಡಲಾಗಿದೆಯೆಂದು ಅವರು ಹೇಳಿದ್ದಾರೆ. "ರಾಷ್ಟ್ರವೂ ಕಾಂಗ್ರೆಸ್ಸೂ ಜಿನ್ನಾರ ನಿರ್ಣಯಕ್ಕಾಗಿ ಕಾಯುತ್ತ ಇಲ್ಲ ಅವರು ಬಂದರಂತೂ ಒಳಿತೇ ಆಯಿತು "ಈಗ ಲೀಗು ಒಲ್ಲೆಂದರೆ ಮುಂದೆ ಅದು ಬರಲಪೇಕ್ಷಿಸಿದಾಗ ತುಂಬಲೆಂದು ಅದರ ಪಾಲಿನ ಸ್ಥಾನಗಳನ್ನು ತೆರವಾಗಿಡುವ ಸಂಭವ ಕೂಡ ಇಲ್ಲವೆಂದು ಕೇಸಕರರು ತಿಳಿಸಿದರು. ಇದಕ್ಕಾಗಿ ಕಾಂಗ್ರೆಸ್ಸು ಕೇಂದ್ರ ಮಂತ್ರಿಮಂಡಲಕ್ಕೆ ಎರಡು ಯಾದಿಯನ್ನು ಸಿದ್ಧಗೊಳಿಸಿದೆ. ಪಕ್ಷಾತೀತ ಮುಸ್ಲಿಮರನ್ನು ಸೇರಿಸಿಕೊಂಡು ಕೆಲಸಸಾಗಿಸಲಾಗುವದು.

### ಸೀಖರ ಸಹಕಾರ

ಬ್ರಿಟಿಶ ರಾಯಭಾರದ ಯೋಜನೆಯನ್ನು ಮೊದಲು ತಿರಸ್ಕರಿಸಿದ್ದ ಸೀಖರು ಕಾಂಗ್ರೆಸ್ ಕಾರ್ಯ ಸಮಿತಿ ಕೊಟ್ಟ ಆಶ್ವಾಸನಗಳಿಂದ ಸಂತೃಪ್ತವಾಗಿ ಸಂದರ್ಭ ಬಂದೊಡನೆ ಘಟನಾ ಸಮಿತಿಯಲ್ಲಿಯೂ ನಡುಗಾಲ ಸರಕಾರದಲ್ಲಿಯೂ ಸೇರಿ ಸಹಕರಿಸಬೇಕೆಂದು ಪುನಃ ನಿರ್ಣಯಿಸಿದ್ದಾರೆ. ಸೀಖ ಪಾಂಥಿಕ ಮಂಡಲದವರ ಈ ನಿರ್ಣಯದಿಂದ ಇನ್ನೊಂದು ದೊಡ್ಡ ತೊಡಕು ಬಗೆಹರಿದಂತಾಗಿದೆ.

### ಲೀಗಿನ ಮುಂದಿನ ಧೋರಣೆಯೇನು?

ಲೀಗ ಮುಂದಾಳುಗಳು ಮಾತಾಡುತಿರುವದರಲ್ಲಿ ಅರ್ಥದಷ್ಟಾದರೂ ಹೃತ್ಪೂರ್ವಕವಿರುವದಾದರೆ ಕಾಂಗ್ರೆಸ್ಸಿನ ಕೊಡುಗೆಯನ್ನು ಜಿನ್ನಾ ಸಾಹೇಬರು ಸ್ವೀಕರಿಸುವ ಸಂಭವ ಬಹಳ ಕಡಿಮೆಯೆಂದು ಹೇಳಬೇಕು. ಅದೂ ಕಾಂಗ್ರೆಸ್ ಕಾರ್ಯಸಮಿತಿಯ ಗೊತ್ತುವಳಿಯನ್ನು ಕುರಿತು ಜಿನ್ನಾಸಾಹೇಬರು ಇಷ್ಟು ಒರಟು ಭಾಷೆಯನ್ನಾಡಿದ ನಂತರ. ಅತ್ತ ಲೀಗ್ ಮುಂದಾಳುಗಳು ಉತ್ತೇಜಕ ಭಾಷೆಯಲ್ಲಿ ಮಾತಾಡುತ್ತಿದ್ದಾರೆ. "ಬ್ರಿಟಿಷರೊಡನೆ ಕಾಂಗ್ರೆಸ್ಸು ಸೇರಿಕೊಂಡರೆ ಯಾದವೀ ಯುದ್ಧ ಖಂಡಿತ" "ಮುಸ್ಲಿಂ ಪ್ರಾಂತಗಳ ಮೇಲೆ ಕಾಂಗ್ರೆಸ್ಸು ಹೇಗೆ ಅಧಿಕಾರ ನಡೆಸುವದೋ ನೋಡುವೆವು!" "ಅಡಳಿತ ಸಾಗಿಸುವದನ್ನೇ ಅಸಾಧ್ಯವಾಗಿ ಮಾಡಿಬಿಡುವೆವು!" "ಕಾಂಗ್ರೆಸು ಬೆಂಕಿಯೊಡನೆ ಸರಸ ಆಡುತಿರುವದು!" ಎಂದು ಮುಂದಾಗ್ರಿ ಲೀಗ ಬಾಯಿಬಡಕರು ಅರಚುತಿದ್ದಾರೆ. ಲೀಗ ಮಂತ್ರಿಗಳು ಅಧಿಕಾರದಲ್ಲಿರುವ ಸಿಂಧ, ಬಂಗಾಲ ಪ್ರಾಂತಗಳಲ್ಲಿ ಮುಸ್ಲಿಂ ಲೀಗಿನ "ಪ್ರತ್ಯಕ್ಷ ಹೋರಾಟ ದಿನ" ವಾದ ಇದೇ ತಿಂಗಳ ೧೬ ನೆ ತಾರೀಖನ್ನು ಸಾರ್ವಜನಿಕ ರಜಾ ದಿನವಾಗಿ ಘೋಷಿಸಲಾಗಿದೆ. ಆ ದಿನದ ಹರತಾಳವನ್ನು ಸರಕಾರಿ ಅಧಿಕಾರಿ ಮುಖಾಂತರ ನಿರ್ಬಂಧಪೂರ್ವಕವಾಗಿ ಯಶಸ್ವಿಗೊಳಿಸುವ ಉಪಾಯವಿದು. ಬಂಗಾಲದಲ್ಲಿ ಲೀಗ್ ಸಂಸ್ಥೆಗಳು ಉಗ್ರವಾದ ಹಸ್ತಪತ್ರಿಕೆಗಳನ್ನು ಹಂಚಿ ಮುಸ್ಲಿಂ ಜನತೆಯಲ್ಲಿ ಪ್ರಚಂಡ ಉದ್ವೇಗವನ್ನು ಹಬ್ಬಿಸಲು ಪ್ರಯತ್ನಿಸುತಿದ್ದಾರೆ. ಅದರಿಂದ ಲೀಗ್ ಮುಂದಾಳುಗಳು ಒಮ್ಮೆ ಶಕ್ತಿ ಪರೀಕ್ಷೆಗೆ ನಿಲ್ಲಬಹುದೆಂಬ ಊಹೆಗೆ ಕಾರಣವಾಗಿದೆ. ಜಿನ್ನಾ ಸಾಹೇಬರು ಸೆರೆಮನೆಯ ಜೀವನಕ್ಕೆ ಕಷ್ಟನಿಷ್ಠುರಗಳನ್ನು ಸಹಿಸಲು ಸಾಧನೆ ನಡೆಸಿರುವರಂತೆ! ಆದರೆ ಕಾಂಗ್ರೆಸ್ಸು ವಾಯಿಸರಾಯರ ಅಮಂತ್ರಣವನ್ನು ಸ್ವೀಕರಿಸುವ ನಿರ್ಣಯ ಮಾಡಿದಾಗ ಇದೆಲ್ಲವನ್ನು ಮುಂಗಂಡು, ಪರಿಣಾಮಗಳಿಗೆ ಸಿದ್ಧವಾಗಿಯೇ ಮುಂದಡಿಯಿಟ್ಟಿದೆಯೆಂಬದನ್ನು ಮರೆಯತಕ್ಕದ್ದಲ್ಲ.

---

ಸಂಯುಕ್ತಪ್ರಾಂತ ಕಾಂಗ್ರೆಸ ಮಂತ್ರಿಮಂಡಳದಲ್ಲಿ ಮತ್ತೆ ಮೂರು ಮಂತ್ರಿಗಳನ್ನು ಹೆಚ್ಚಿಗೆ ತೆಗೆದುಕೊಂಡು ಮಂತ್ರಿಗಳ ಸಂಖ್ಯೆಯನ್ನು ೯ ಕ್ಕೆ ತರಲಾಗಿದೆ. ಹೊಸ ಮಂತ್ರಿಗಳಾರೆಂದರೆ ಠಾಕೂರ ಹುಕಮಸಿಂಗ, ಅಹಮ್ಮದಖಾನ ಶೆರವಾಣಿ ಮತ್ತು ಗಿರಿಧರಲಾಲ (ಹರಿಜನ)

---

ವಿಪರೀತ ಮಳೆಯ ದೆಸೆಯಿಂದ ಕಲ್ಯಾಣಪುರ ಹೊಳೆಯಲ್ಲಿ ಒಂದು ದೋಣಿ ಮುಗುಚಿ ಹದ್ದು ಒಬ್ಬಳು ಹೆಣ್ಣುಮಗಳ ಪ್ರಾಣಹಾನಿಯಾಗಿದೆ.



# ಅಂತರ್ ರಾಷ್ಟ್ರೀಯ

### ರಶಿಯಾಕ್ಕೆ ಸೋಲು

ಹಲವು ದಿವಸಗಳ ಹೋರಾಟದ ನಂತರವೂ ಪ್ಯಾರಿಸ ಶಾಂತಿ ಪರಿಷತ್ತಿನಲ್ಲಿ ರಶಿಯಾಕ್ಕೆ ಸೋಲು ಗಂಟು ಬಿತ್ತು. ನಿಯಮಾವಲಿ ಸಮಿತಿಯಲ್ಲಿಯೂ ಅಂತೆಯೆ ಮಹಾ ಅಧಿವೇಶನದಲ್ಲಿಯೂ ವಿದೇಶ ಮಂತ್ರಿ ಮೊಲಟೋವರು, ಎಲ್ಲ ನಿರ್ಣಯಗಳು ಎರಡು ಮೂರಾಂಶ ಬಹುಮತದಿಂದ ಪಾಸಾಗಬೇಕೆಂಬ ನಿಯಮಕ್ಕೆ ಒಪ್ಪಿಗೆಯನ್ನು ಪಡೆಯಲು ಮಾಡಿದ ಭಗೀರಥ ಪ್ರಯತ್ನಗಳು ವ್ಯರ್ಥವಾದವು. ಅದರಲ್ಲಿಯೂ ಅವರಿಗೆ ಅತ್ಯಂತ ಪ್ರಿಯವಾದ ಎರಡು ಮೂರಾಂಶ ಬಹುಮತದಿಂದಲೇ ಅವರ ಸೂಚನೆ ತಿರಸ್ಕರಿಸಲ್ಪಟ್ಟದ್ದು ಮಹತ್ವದ ಸಂಗತಿ. ೨೧ ರಾಷ್ಟ್ರಗಳಲ್ಲಿ ಆರು ರಾಷ್ಟ್ರಗಳು ಮಾತ್ರ ಅವರ ಪರವಾಗಿ ಮತವಿತ್ತವು. ಉಳಿದ ೧೫ ವಿರುದ್ಧ ಮತವಿತ್ತು ಸಾದಾ ಬಹುಮತವಿದ್ದರೆ ಸಾಕೆಂಬದಾಗಿ ಸ್ಪಷ್ಟವಾದ ಅಭಿಮತವಿತ್ತವು. ನಿಯಮಾವಲಿ ಸಮಿತಿಯಲ್ಲಿ ನಡೆದ ತಿಕ್ಕಾಟವನ್ನು ಬಗೆಹರಿಸಲು ಬ್ರಿಟಿಶರು ಮಧ್ಯಮಾರ್ಗವೊಂದನ್ನು ಸೂಚಿಸಿದ್ದರು. ಅದರನ್ವಯ ಎರಡು ಮೂರಾಂಶ ಬಹುಮತದಿಂದ ಪಾಸಾದ ಗೊತ್ತುವಳಿಗಳನ್ನೂ ಸಾದಾ ಬಹುಮತದಿಂದಾದ ಗೊತ್ತುವಳಿಗಳನ್ನು ತಾರತಮ್ಯದಿಂದ ವಿದೇಶ ಮಂತ್ರಿಗಳ ಸಭೆಗೆ ಒಪ್ಪಿಸಬೇಕು. ಇದು ನಿಯಮಾವಲಿ ಸಮಿತಿಯಲ್ಲಿ ಪಾಸಾಯಿತು. ಆದರೆ ಮಹಾಧಿವೇಶನದಲ್ಲಿ ಮೊಲಟೋವರು ಪುನಃ ಇದನ್ನೂ ವಿರೋಧಿಸಿದರು. ಆದರೆ ಅವರಿಗೆ ಯಶಸ್ಸು ದೊರೆಯಲಿಲ್ಲ. ಮೊಲೊಟೋವರು ಉಗ್ರವಾಗಿ ಭಾಷಣ ಮಾಡಿ ವಿದೇಶ ಮಂತ್ರಿಗಳ ಪರಿಷತ್ತಿನಲ್ಲಿ ತಾವೇ ಒಪ್ಪಿದ್ದ ಎರಡು ಮೂರಾಂಶ ಬಹುಮತದಕಡೆಗೆ ಈಗ ಅಂಗ್ಲೋ ಅಮೇರಿಕನ್ನರು ಬೆನ್ನುತಿರುಗಿಸಿದ್ದನ್ನು ಖಂಡಿಸಿದರು.

### ಇಟಲಿಯ ಶಾಂತಿ ಒಪ್ಪಂದ

ಗೊತ್ತುವಳಿಯ ಕ್ರಮವನ್ನು ನಿರ್ಧರಿಸಿದ ನಂತರ ಪರಿಷತ್ತು ಇಟಲಿಯ ಶಾಂತಿ ಒಪ್ಪಂದದ ಚರ್ಚೆಯ ಕಡೆಗೆ ಹೊರಳಿತು. ಇಟಲಿಯ ಮುಖ್ಯ ಮಂತ್ರಿ ಸಿನಾರ ಗಸ್ಪೇರಿ ಸಭೆಯ ಮುಂದೆ ಭಾಷಣ ಮಾಡಿ ವಿದೇಶ ಮಂತ್ರಿಗಳು ಸಿದ್ಧಗೊಳಿಸಿರುವ ಒಪ್ಪಂದದ ಕರಡು ತೀರ ಕಠೋರವಾಗಿದೆಯೆಂದು ವಾದಿಸಿದರು. ಮಿತ್ರರಿಗೆ ಸಹಾಯ ಮಾಡುವದರಲ್ಲಿ ಇಟಲಿ ೧೦ ಸಾವಿರ ಜನರನ್ನು ಕಳೆದುಕೊಂಡಿದೆ, ೪೦೦೦೦ ಜನ ಕಾಣೆಯಾಗಿದ್ದಾರೆ. ಹೀಗಿದ್ದರೂ ತಮ್ಮ ವಸಾಹತುಗಳನ್ನು ಕಸಿದುಕೊಳ್ಳುವದು ಹಾಗು ತಮ್ಮ ನೌಕಾಪಡೆಯನ್ನು ಪೂರ್ಣ ಇಲ್ಲದಂತೆ ಮಾಡುವದು ಅನ್ಯಾಯವೆಂದು ಅವರು ಹೇಳಿದ್ದಲ್ಲದೆ ಇಟಲಿಯ ಪ್ರಜಾ ವಿಡೆ. ರಾಷ್ಟ್ರ ಮನ್ನಣೆ ಕೊಡಬೇಕೆಂದು ಪ್ರಾರ್ಥಿಸಿದರು. ಟ್ರಿಸ್ಟೆ ಬಂದರ ಇಟಲಿಗೇ ಸೇರತಕ್ಕದ್ದೆಂದೂ ಅವರ ಅಭಿಪ್ರಾಯವಿತ್ತು. ಯುಗೊಸ್ಲಾವಿಯಾದ ಪ್ರತಿನಿಧಿ, ಇಟಲಿಗೆ ಸವಲತ್ತು ಕೊಟ್ಟರೆ ಅದು ಇನ್ನೊಮ್ಮೆ ಆಕ್ರಮಣಶೀಲವಾದೀತೆಂದು ಭಯ ವ್ಯಕ್ತಗೊಳಿಸಿದನು. ಉತ್ತರ ಆಫ್ರಿಕೆಯ ಇಟಾಲಿಯನ್ ವಸಾಹತುಗಳನ್ನು ಒಂದು ವರ್ಷ ಅದರ ಕೈಲೆ ಬಿಡುವ ವಿಚಾರಕ್ಕೆ ಇತಿಯೋಪಿಯಾದ ವಿರೋಧ ಬಂತು. ಎರಿಟ್ರಿಯಾ ತನಗೆ ಸಿಗಬೇಕೆಂದು ಅದು ವಾದಿಸಿತು ಈ ಚರ್ಚೆ ಇನ್ನೂ ಮುಗಿದಿಲ್ಲ. ಈ ನಡುವೆ ಇಟಲಿಯ ಶಾಂತಿ ಒಪ್ಪಂದದಲ್ಲಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಗೊಳಿಸಲು ಅಲ್ಬೇನಿಯಾ, ಕ್ಯೂಬಾ ಇಜಿಪ್ತ, ಮೆಕ್ಸಿಕೋಗಳಿಗೆ ಆಮಂತ್ರಣ ಕೊಡಬೇಕೆಂದು ಪರಿಷತ್ತು ನಿರ್ಧರಿಸಿದೆ.

ಅದೇ ಪ್ರಕಾರ ರುಮಾನಿಯವೂ ತನಗೆ ಒಪ್ಪಿಸಿದ ಶಾಂತಿ ಕರಾರುಗಳು ಕಠೋರವಾಗಿವೆಯೆಂದು ವಾದಿಸಿತು.

ಅತ್ತ ಯುಕ್ತ ರಾಷ್ಟ್ರಗಳ ಸಭೆ ಸೆಪ್ಟೆಂಬರದಲ್ಲಿ ಪ್ರಾರಂಭವಾಗಲಿದೆ. ಅದುದರಿಂದ ಶಾಂತಿ ಪರಿಷತ್ತಿನ ಕಾರ್ಯಕಲಾಪಗಳು ಸೆಪ್ಟಂಬರ ೧೫ ರಷ್ಟಕ್ಕೆ ಮುಗಿಯದಿದ್ದರೆ ಸದ್ಯದ ಅಧಿವೇಶನವನ್ನು ಮುಂದುವರಿಸಲಾಗುವದೆಂದು ಸಾರಲಾಗಿದೆ. ಅದು ಮತ್ತೆ ಸೇರುವದು ಒಹಳ ಮಟ್ಟಿಗೆ ಮುಂದಿನ ವರ್ಷ ಜನೆವರಿಯಲ್ಲಿ.

### ತುರ್ಕಿಯ ಮೇಲೆ "ಬಾಂಬು" !

ಪಂ. ಜವಾಹರರ ಮಾತಿನಲ್ಲಿ ಹೇಳಬೇಕಾದರೆ ದಿನದಿನವೂ "ಹೊಸ ಹೊಸ ಪರಿಸ್ಥಿತಿಗಳನ್ನು ಉಂಟು ಮಾಡುತ್ತ ಹೋಗುವದೇ" ರಶಿಯಾದ ಕೆಲಸವಾಗಿದೆಯೆಂದು ತೋರುತ್ತದೆ. ಕಳೆದ ವಾರ ಬಡ ತುರ್ಕಿಗೆ ಅದು ಒಂದು ರಾಯಸವನ್ನು ಕಳಿಸಿ ಅಂತರ್‌ರಾಷ್ಟ್ರೀಯ ರಾಜಕಾರಣದಲ್ಲಿ ಪ್ರಥಮ ವರ್ಗದ ಬಿಕ್ಕಟ್ಟೊಂದನ್ನು ನಿರ್ಮಿಸಿಬಿಟ್ಟಿದೆ. ಭೂಮಧ್ಯ ಸಮುದ್ರದೊಡನೆ ಕಪ್ಪು ಸಮುದ್ರವನ್ನು ಜೋಡಿಸುವ ಡಾರ್ಡನೆಲ್ಸ ಜಲಸಂಧಿಯ ನಿಯಂತ್ರಣದ ಬಗ್ಗೆ ೧೯೩೬ ರಲ್ಲಾದ ಮಾಂಟ್ರೋ ಒಡಂಬಡಿಕೆಯಲ್ಲಿ ಬದಲಾವಣೆಯಾಗಬೇಕೆಂದು ಅದು ತುರ್ಕಿಯನ್ನು ಕೇಳಿದೆ. ಇದಲ್ಲದೆ ಡಾರ್ಡನೆಲ್ಸ ಜಲಸಂಧಿಯ ಸಂರಕ್ಷಣದಲ್ಲಿಯೂ ಅದು ಪಾಲು ಕೇಳಿದೆ.

ಪಾಟ್ಸಡ್ಯಾಂ ಪರಿಷತ್ತಿನಲ್ಲಿ ಪ್ರಬಲ ರಾಷ್ಟ್ರತ್ರಯ ಒಂದು ಗುಪ್ತ ಒಡಂಬಡಿಕೆಯ ಮೂಲಕ ಡಾರ್ಡನೆಲ್ಸ ನಿಯಂತ್ರಣದಲ್ಲಿ ಬದಲಾವಣೆಯಾಗಬೇಕೆಂದು ಒಪ್ಪಿಕೊಂಡಿತ್ತೆಂದು ನಂಬಲು ಕಾರಣವಿದೆ. ಅದನ್ನನುಸರಿಸಿಯೇ ಈಗ ಸೋವಿಯಟ್ ಮುಂದಾಳುಗಳು ಈ ಸತ್ರವನ್ನು ಪ್ರಾರಂಭಿಸಿರಬೇಕು. ಆದರೆ ತುರ್ಕಿಯನ್ನು ಹದ ಮಾಡುವಗೋಸುಗ ತಮ್ಮ ಸಾಮಾನ್ಯ ಸಾಧನವಾದ ಅಪಪ್ರಚಾರದ ಅಸ್ತ್ರವನ್ನೂ ಅವರು ಎತ್ತಿದ್ದಾರೆ. ಇದೀಗ ಒಂದು ವಾರದ ಕೆಳಗೆ ರಾಜೀನಾಮೆ ಕೊಟ್ಟು ಹೋದ ತುರ್ಕಿಯ ಮುಖ್ಯ ಮಂತ್ರಿ ಸರಜೋಗಲು ಅವರು ಯುದ್ಧದಲ್ಲಿ ರಶಿಯಾದ ನಾಶವಾಗಬೇಕೆಂದು ಬಯಸುತಿದ್ದರೆಂಬ ಬಗ್ಗೆ ಜರ್ಮನ್ ಗುಪ್ತ ಕಾಗದಪತ್ರಗಳು ಕೆಲವನ್ನು "ಪ್ರವಡಾ" ದಲ್ಲಿ ಪ್ರಕಟಿಸಲಾಗಿದೆ. ತುರ್ಕಿಗೆ ರಶಿಯನ್ ರಾಯಸ ಹೋದಾಗಲೆ ಸರಜೋಗಲು ರಾಜೀನಾಮೆ ಕೊಟ್ಟಿರಬೇಕು.

ರಶಿಯಾ ಈಗ ಮುಂದೊಡ್ಡಿರುವ ಬೇಡಿಕೆಯಲ್ಲಿ ಡಾರ್ಡನೆಲ್ಸ ರಕ್ಷಣೆಯಲ್ಲಿ ಪಾಲು ಕೇಳಿರುವದರಿಂದ ತುರ್ಕಿಗೆ ಸೇರಿದ ಪ್ರದೇಶದಲ್ಲಿ ಅದು ನೌಕಾ ಠಾಣೆಯನ್ನು ಸ್ಥಾಪಿಸುವ ಹಕ್ಕು ಬೇಡಿದಂತಾಗಿದೆಯೆಂದು ರಾಜಕಾರಣಿಗಳ ಮತ. ಡಾರ್ಡನೆಲ್ಸ ಒಡಂಬಡಿಕೆಯನ್ನು ಬದಲಿಸುವ ಪ್ರಶ್ನೆಯನ್ನು ವಿಶಾಲ ಅಂತರ್‌ರಾಷ್ಟ್ರೀಯ ಚರ್ಚೆಯಿಂದ ಬಿಡಿಸಬೇಕೆಂದು ಅಂಗ್ಲೋ-ಅಮೇರಿಕನ್ ಮತವಿರುವಾಗ ಕಪ್ಪು ಸಮುದ್ರದ ರಾಷ್ಟ್ರಗಳಿಗಷ್ಟೇ ಅದರಲ್ಲಿ ಹಕ್ಕಿರಬೇಕೆಂದು ರಶಿಯನ್ ಪ್ರತಿಪಾದನೆಯಿದ್ದಂತೆ ತೋರುತ್ತದೆ.

ಅಂತರ್‌ರಾಷ್ಟ್ರೀಯ ಚರ್ಚೆಯಿಂದ ಬಗೆಹರಿಸಬೇಕಾದ ಈ ಪ್ರಶ್ನೆಯನ್ನು ತುರ್ಕಿ-ರಶಿಯಾಗಳೆರಡೆ ಚರ್ಚಿಸಲಾರವೆಂದು ತುರ್ಕಿ ಉತ್ತರ ಕಳಿಸಿದೆಯಂತೆ. ಇದರ ಬಗ್ಗೆ ಮಾಂಟ್ರೊ ಒಡಂಬಡಿಕೆಯಲ್ಲಿ ಪಾಲುಗಾರರಾಗಿದ್ದ ಬಲ್ಗೇರಿಯಾ, ಫ್ರಾನ್ಸ, ಬ್ರಿಟನ್, ಗ್ರೀಸ, ರುಮಾನಿಯಾ, ತುರ್ಕಿ, ಸೋವಿಯಟ್, ಯುಗೊಸ್ಲಾವಿಯಾ ಮತ್ತು ಜಪಾನ ಇವುಗಳಲ್ಲಿ ಕೊನೆಯದನ್ನು ಬಿಟ್ಟು ಉಳಿದ ರಾಷ್ಟ್ರಗಳು ಹಾಗು ಅಮೇರಿಕೆಯನ್ನೊಳಗೊಂಡ ಪರಿಷತ್ತೊಂದು ಬೇಗನೆ ಕೂಡಬಹುದು.

### ಅಕ್ರಮ ವಲಸೆಗೆ ತಡೆ

ಪಾಲಿಸ್ತಾನದ ವಿಭಜನೆಯ ಯೋಜನೆಯ ಹಣೆಬರಹ ಕೂದಲೆಳೆಯ ಮೇಲೆ ಜೋತಾಡುತಿರುವಾಗ ಇತ್ತ ಬ್ರಿಟಿಶರು ಯಹೂದಿ ವಲಸೆಗಾರರ ಮೇಲೆ ತೀಕ್ಷ್ಣ ಕ್ರಮವನ್ನು ಕೈಕೊಂಡಿದ್ದಾರೆ. ಅತ್ತ ಪಾಲಿಸ್ತಾನದ ಭವಿತವ್ಯದ ಚರ್ಚೆ ಭೀಷಣವಾಗಿ ನಡೆಯುತಿದ್ದಾಗಲೆ ಇತ್ತ ಅತ್ಯಂತ ಕೌಶಲದಿಂದ ಸಂಘಟಿಸಲ್ಪಟ್ಟ ಯುರೋಪಿಯನ್ ಯಹೂದ್ಯರು ವಲಸೆಯ ಅಪ್ಪಣೆ ಚೀಟಿ ಪಡೆಯದೆ ಕಾಯದೆ ವಿರುದ್ಧವಾಗಿ ಸಾವಿರಗಟ್ಟಲೆಯಲ್ಲಿ ಪಾಲಿಸ್ತಾನದಲ್ಲಿ ಬಂದಿಳಿಯುತ್ತಲೆ ಇದ್ದರು. ಜನೆವರಿಯಿಂದ ಈ ವರೆಗೆ ಹೀಗೆ ಅಕ್ರಮ ವಲಸೆಗಾರರಾಗಿ ಬಂದ ೧೦೦೦೦ ಯಹೂದ್ಯರು ಪಾಲಿಸ್ತಾನದಲ್ಲಿದ್ದಾರೆಂದು ತಿಳಿದುಬಂದಿದೆ. ೧೯೩೯ ರ ಶ್ವೇತ ಪತ್ರಿಕೆಯಲ್ಲಿ ಹೇಳಿದ ಪ್ರಕಾರ ೭೫೦೦೦ ಯಹೂದ್ಯರು ಈಗಾಗಲೆ ಪಾಲಿಸ್ತಾನದಲ್ಲಿ ಸೇರಿಕೊಂಡಿರುವದರಿಂದ ಇನ್ನು ಈ ಪರಿ ಅಕ್ರಮ ವಲಸೆಯನ್ನು ತಡೆಯದಿದ್ದರೆ ಅರಬರು ಖಂಡಿತವಾಗಿ ತಮ್ಮ ವಿರುದ್ಧ ದಂಗೆಯೇಳುವರೆಂದು ಬ್ರಿಟಿಶರು ತಿಳಿದುಕೊಂಡಿದ್ದಾರೆ. ಇದರಿಂದ ಈ ಅಕ್ರಮ ವಲಸೆಗಾರರು ಪ್ರವೇಶಿಸದಂತೆ ತಡೆಯಲು ಬ್ರಿಟಿಶ ಸರಕಾರ ನಿರ್ಧರಿಸಿದ್ದು ತಮ್ಮ ಯುದ್ಧ ಹಡಗಗಳನ್ನು ಕಳಿಸಿ ವಲಸೆಗಾರರ ಹಡಗುಗಳನ್ನು ಹಿಡಿದು ಅವುಗಳೊಳಗಿರುವವರನ್ನು ಗಡಿಪಾರು ಮಾಡಲಾರಂಭಿಸಿದ್ದಾರೆ. ಈಗಾಗಲೆ ಮೂರು ಹಡಗಗಳನ್ನು ತಡೆದು ಸಾವಿರಾರು ವಲಸೆಗಾರರನ್ನು ಸಾಯಪ್ರೆಸ್ ದ್ವೀಪಕ್ಕೆ ಗಡಿಪಾರು ಮಾಡಿರುವದರಿಂದ ಯಹೂದ್ಯರು ಬಹಳ ಹುಯಲೆಬ್ಬಿಸಿದ್ದಾರೆ.

ಪಾಲಿಸ್ತಾನದ ವಿಷಯದಲ್ಲಿ ತಮಗೆ ನೆರವಾಗಲು ರಶಿಯಾವನ್ನು ಕೇಳಿಕೊಳ್ಳಲು ಅರಬ ಪ್ರಮುಖರು ಮಿ. ಶುಕ್ರಿಯವರನ್ನು ರಶಿಯಾಕ್ಕೆ ಕಳಿಸಿರುವದರಿಂದ ಬ್ರಿಟಿಶರು ತೀಕ್ಷ್ಣ ಕ್ರಮ ಕೈಕೊಳ್ಳದೆ ವಿಧಿಯಿಲ್ಲವಾಗಿದೆ.

### ಇರಾಣದ ಪ್ರತಿಭಟನೆ

ಬಸರಾಕ್ಕೆ ಹಿಂದೀ ಸೈನ್ಯವನ್ನು ಕಳಿಸಿದ್ದು ಇರಾಣದಲ್ಲಿ ಹುಯಿಲನ್ನು ಎಬ್ಬಿಸಿಬಿಟ್ಟಿದೆ. ಇರಾಣ ಸರಕಾರ ಇದನ್ನು ಪ್ರತಿಭಟಿಸಿ ಬ್ರಿಟಿಶ ರಾಯಭಾರಿಗೊಂದು ರಾಯಸವನ್ನು ಕೊಟ್ಟಿದೆ. ತಮ್ಮ ಬೆದರುಗುಂಡಿನ ಫಲವಾಗಿ ಹೀಗೆ ಅಂತರ್‌ರಾಷ್ಟ್ರೀಯ ರಂಗದಲ್ಲಿ ಅಪಕೀರ್ತಿಯುಂಟಾಗುವದೆಂದು ಬ್ರಿಟಿಶ ಸರಕಾರ ಮೊದಲು ಊಹಿಸಿದ್ದಿಲ್ಲವೇನೊ. ಆದರೆ ಬೊಬ್ಬಾಟ ಹೆಚ್ಚಿದ್ದರಿಂದ ಬ್ರಿಟಿಶ ವಿದೇಶ ಖಾತೆ ತನ್ನ ಸದುದ್ದೇಶವನ್ನು ಪ್ರಕಟಿಸಿ ಉತ್ತರ ಕೊಟ್ಟಿದೆ. ಎಣ್ಣೆಗಣಿ ಪ್ರದೇಶದಲ್ಲಿ ಶಾಂತಿ ಸುವ್ಯವಸ್ಥೆಗಳನ್ನು ಕಾಯ್ದುಕೊಳ್ಳುವ ಹೊಣೆ ಇರಾಣಿ ಸರಕಾರದ್ದೆಂದು ಅದು ಒಪ್ಪಿಕೊಂಡಿದೆ. ಈಗ ಸೈನ್ಯ ಇರಾಣದ ಪ್ರದೇಶದಲ್ಲಿ ಪ್ರವೇಶಿಸಿಲ್ಲ ಇರಾಕದಲ್ಲಿರುವ ಬಸರಾದಲ್ಲಿದೆ ಇದಕ್ಕೆ ಇರಾಕ ಸರಕಾರದ ಒಪ್ಪಿಗೆ ಇದೆಯೆಂದು ಅವರು ಚಾತುರ್ಯದಿಂದ ಸಾಧಿಸುತಿದ್ದಾರೆ. ಆದರೆ ಒಮ್ಮೆ ಇರಾಣದ ವಿರುದ್ಧ ಹೆಚ್ಚುಕಡಿಮೆ ಆಕ್ರಮಣಕಾರಿ ಅಭಿಪ್ರಾಯವನ್ನು ವ್ಯಕ್ತಗೊಳಿಸಿದ ನಂತರ ಸೈನ್ಯವನ್ನು ಯಾರ ಪ್ರದೇಶಕ್ಕೇ ಕಳಿಸಿರಲಿ ಬ್ರಿಟಿಶ ಸರಕಾರದ ಈ ನೆವಗಳಿಂದ ಇರಾಣಕ್ಕೆ ಸಂತೃಪ್ತಿಯಾಗಲಾರದು. ಅದರಿಂದ ಅದು, ಈ ಸೈನ್ಯಗಳನ್ನು ಹಿಂತೆಗೆದುಕೊಳ್ಳದಿದ್ದರೆ ಯುಕ್ತರಾಷ್ಟ್ರಗಳಿಗೆ ದೂರು ಕೊಡಲು ಸಿದ್ಧವಾಗಿದೆಯೆಂದು ತಿಳಿಯುತ್ತದೆ.

### ಆಸ್ಟ್ರೇಲಿಯಾಕ್ಕೂ ಸಾಮ್ರಾಜ್ಯ ಬೇಕು !

ಬ್ರಿಟಿಶ ಸಾಮ್ರಾಜ್ಯ ಒಡೆದೊಡೆದು ಹೋಗುತಿರುವ ಈ ಕಾಲದಲ್ಲಿ ಅದರ ಒಂದೊಂದು ತುಣುಕೂ ತನ್ನದೇ ಸಾಮ್ರಾಜ್ಯ ಸ್ಥಾಪಿಸಲು ಹೊರಡುವದೋ ಏನೊ. ಆಸ್ಟ್ರೇಲಿಯಾದ ಕೂಲಿಕಾರ ಸರಕಾರದ ಮುಖ್ಯ ಮಂತ್ರಿ ಚೀಫ್ಲೆಯವರು ಕಳೆದ ವಾರ ತಮ್ಮ ಪಾರ್ಲಮೆಂಟಿನಲ್ಲಿ ಮಾತಾಡುತ್ತ ನ್ಯೂಝಿಲಂಡ ದ್ವೀಪದ ಸ್ವಾಮಿತ್ವ ಆಸ್ಟ್ರೇಲಿಯಾಕ್ಕೆ ಪೂರ್ಣವಾಗಿ ಸಿಗಬೇಕೆಂದು ವಾದಿಸಿದರು. ಆಸ್ಟ್ರೇಲಿಯಾದ ಉತ್ತರಕ್ಕಿರುವ ಈ ಅತಿದೊಡ್ಡ ಪ್ಯಾಸಿಫಿಕ್ ದ್ವೀಪವನ್ನು ಇತರ ದ್ವೀಪಗಳೊಡನೆ ಮೊದಲನೆ ಮಹಾಯುದ್ಧದ ನಂತರ ಮಿತ್ರರು ಜರ್ಮನಿಯಿಂದ ಕಸಿದುಕೊಂಡು ಆಸ್ಟ್ರೇಲಿಯಾದ ಅದಿಷ್ಟ ಆಡಳಿತೆಗೆ ಒಪ್ಪಿಸಿದ್ದರು. ಆದರೆ ಆಸ್ಟ್ರೇಲಿಯಾದ ರಕ್ಷಣೆಗಾಗಿ ಈ ದ್ವೀಪದಲ್ಲಿ ನೌಕಾ ನಿಲ್ದಾಣ ಮೊದಲಾದ ಶಾಶ್ವತ ರಚನೆಗಳನ್ನು ಕಟ್ಟಲು ಈ ಆದಿಷ್ಟಾಧಿಕಾರ ಸಾಲದು ಅದು ಕಾರಣ ಅದರ ಸ್ವಾಮಿತ್ವವೇ ತನಗೆ ಬೇಕೆಂದು ಆಸ್ಟ್ರೇಲಿಯಾದ ವಾದ. ಆದರೆ ನ್ಯೂಝಿಲಂಡದ ನಿವಾಸಿಗಳು ನಾಗರಿಕತೆಯಲ್ಲಿ ಹಿಂದುಳಿದವರು. ಶ್ವೇತಜನರ ಸರ್ವೋತ್ತಮತ್ವವನ್ನು ಪ್ರತಿಪಾದಿಸುವ ಆಸ್ಟ್ರೇಲಿಯಾದ ಕೈಲಿ ಅವರ ಭವಿತವ್ಯ ಸುರಕ್ಷಿತವಾಗಿರಲಾರದು.

### ಚೀನದಲ್ಲಿ ಒಪ್ಪಂದವಿಲ್ಲ

ಕಮ್ಯುನಿಸ್ಟರಿಗೂ ಚಿಯಾಂಗರಿಗೂ ಒಪ್ಪಂದ ಮಾಡಿಸಿ ಹಾಕಬೇಕೆಂಬ ಅಮೇರಿಕೆಯ ಜನರಲ್ ಮಾರ್ಶಲ್ಲರ ಪ್ರಯತ್ನಗಳೆಲ್ಲ ವಿಫಲವಾಗಿ ಒಪ್ಪಂದವಾಗುವ ಆಸೆಯೇ ಇಲ್ಲವೆಂದು ಕಳೆದ ವಾರ ಜ. ಮಾರ್ಶಲ್ಲರು ಬಹಿರಂಗವಾಗಿ ಸೋಲು ಒಪ್ಪಿಕೊಂಡರು. ಈ ನಡುವೆ ಕಮ್ಯುನಿಸ್ಟ- ಕೌಮಿಂಟಾಂಗ ಸಶಸ್ತ್ರ ಹೋರಾಟ ಹಬ್ಬುತ್ತಲೆ ಇದೆ. ಸೋವಿಯಟ್ ಅಮೇರಿಕನ ವೈಷಮ್ಯ ಬೆಳೆಯುತ್ತ ಹೋದಂತೆ ಚೀನೀ ಕಮ್ಯುನಿಸ್ಟರ ಬಗ್ಗೆ ಅಮೇರಿಕನ್ ನಿಲುಮೆ ಬದಲಿಸಿದ್ದು ಮಾರ್ಶಲ್ಲರ ಸೋಲಿಗೆ ಕಾರಣವಾಗಿರಬಹುದು. ಅಮೇರಿಕೆ ಚಿಯಾಂಗ ಪಕ್ಷಕ್ಕೆ ಬಹಿರಂಗವಾಗಿಯೇ ಸಹಾಯ ಮಾಡುತಿದೆ. ಆದುದರಿಂದ ಈ ವಿವಾದವನ್ನು ಯುಕ್ತರಾಷ್ಟ್ರ ಸಭೆಯ ಮುಂದೆ ಮಂಡಿಸಬೇಕೆಂದು ಕಮ್ಯುನಿಷ್ಟರು ನಿರ್ಧರಿಸಿದ್ದಾರೆಂದು ತಿಳಿಯುತ್ತದೆ. ಅಮೇರಿಕನ್ನರು ವಿದೇಶಗಳ ಅಂತರಿಕ ವಿವಾದಗಳಲ್ಲಿ ಸಶಸ್ತ್ರ ಹಸ್ತಪ್ರವೇಶ ಮಾಡುವ ವಿಚಾರ ಅಲ್ಲಿ ಚರ್ಚೆಗೆ ಬರಬಹುದು.

---

ಕಾಂಗ್ರೆಸ ಸೋಶಲಿಸ್ಟ ಮುಖಂಡರಾದ ಶ್ರೀ ರಾಮಮನೋಹರ ಲೋಹಿಯಾರವರು ಒಂದು ಪ್ರಕಟನೆ ಹೊರಡಿಸಿ ಘಟನಾತ್ಮಕ ಕಾರ್ಯದಲ್ಲಿ ಸೋಶಾಲಿಸ್ಟರು ಸೇರುವದಿಲ್ಲವೆಂದೂ ಅವರಲ್ಲೂ ಮುಂದೆ ಹೋಗಿ ಅವರು ಕಾಂಗ್ರೆಸ್ಸಿನ ಹಾಗು ಜನತೆಯ ಸಾಮರ್ಥ್ಯವನ್ನು ಬೆಳೆಸಲು ಪ್ರಯತ್ನಿಸುವರೆಂತಲೂ ಸಾರಿದ್ದಾರೆ.

ಜಮೀನ್ದಾರಿ ಪದ್ಧತಿಯ ನಿರ್ಮೂಲನದ ಬಗ್ಗೆ ಯುಕ್ತ ಶಾಸನ ಸಭೆಯಲ್ಲಿ ಕಾಂಗ್ರೆಸ ಪಕ್ಷದವರು ಮಂಡಿಸಿದ ಗೊತ್ತುವಳಿಯು ಪಾಸಾಯಿತು. ಲೀಗಿನವರು ತಾವು ಮಂಡಿಸಿದ ಉಪಸೂಚನೆಯು ತಿರಸ್ಕೃತವಾದದ್ದನ್ನು ನೋಡಿ ಸಭಾತ್ಯಾಗ ಮಾಡಿದರು. ಜಮೀನ್ದಾರಿ ಪಕ್ಷದವರೂ ಗೊತ್ತುವಳಿಯ ಬಗ್ಗೆ ನಿಷೇಧ ವ್ಯಕ್ತಮಾಡಲು ಸಭಾ ಭವನದಿಂದ ಹೊರಬಂದರು.

# ಗಾಂಧೀಜಿಯ ಅಸಾಧಾರಣ ವ್ಯಕ್ತಿತ್ವ

ಲೇಖಕರು— ನಾರ್ಮನ್ ಕ್ಲಿಫ್

ಗಾಂಧಿಯವರ ವಿಶಿಷ್ಟ ಮೂರನೆ ವರ್ಗದ ಡಬ್ಬಿಯಲ್ಲಿ ಅವರ ಸಂಗಡ ಪ್ರಯಾಣ ಮಾಡುವ ಸೌಭಾಗ್ಯ ದೊರೆಯುವ ಇಂಗ್ಲೀಷ ಜನರು ವಿರಳ. ಈ ಸೌಭಾಗ್ಯದ ಜೊತೆಗೆ ಈ ನಮ್ಮ ಯುಗದ ಅತ್ಯಂತ ಅಸಾಧಾರಣ ಮನುಷ್ಯರಲ್ಲೊಬ್ಬರಾದ ಗಾಂಧಿಯವರ ಚಿತ್ತಪಥದಲ್ಲಿ ಸಂಚರಿಸುವ ಯೋಗ ನನಗೆ ದೊರಕಿತ್ತು. ಅದೊಂದು ಚಮತ್ಕಾರಕ ಅನುಭವವಾಗಿತ್ತು.

ಗಾಂಧಿಯವರು ಮಾತಾಡುವದೆಂದರೆ ಎಲ್ಲರಿಗೂ ಕೇಳುವಂತೆ ಚಿಂತಿಸುವದು. ತಮ್ಮ ನಂಬಿಕೆಯ ಗೆಳೆಯರ ಸಂಗಡ ಸಂಭಾಷಿಸುವಾಗ ಅವರು ಏನನ್ನೂ ಬಚ್ಚಿಡದೆ ತಮ್ಮ ಮನಸನ್ನು ತೆರೆದಿಡುತ್ತಾರೆ.

ಬ್ರಿಟಿಶ ರಾಯಭಾರ ಹಿಂದುಸ್ತಾನದಲ್ಲಿ ಉಳಿದುಕೊಂಡ ಅವಧಿಯಲ್ಲೆಲ್ಲ ಗಾಂಧಿಯವರು ಅದಕ್ಕೂ ಮತ್ತೆಲ್ಲರಿಗೂ ಮಂತ್ರಾಲೋಚನೆ ಹೇಳುವವರಾಗಿದ್ದರು. ರಾಯಭಾರದ ಮುಂದೆ ತಮ್ಮ ವಿಚಾರಗಳನ್ನು ಮಂಡಿಸಿದ ಮಹಾರಾಜರಿಂದ ಹಿಡಿದು ಬಡರೈತನ ವರೆಗಿನ ಸಾವಿರಾರು ಹಿಂದೀಯರಲ್ಲಿ ಭಂಗೀ ವಸತಿಯಲ್ಲಿದ್ದ ಮಹಾತ್ಮರೊಡನೆ ಕೂಡಲು ಮಂತ್ರಾಲೋಚನೆ ಕೇಳದೆ ಇದ್ದವರು ಬರಿ ಕೈಬೆರಳಿನಲ್ಲೆಣಿಸುವಷ್ಟು ಜನರು ಮಾತ್ರ.

ಸಂಬಂಧಪಟ್ಟ ಪಕ್ಷಗಳೆಲ್ಲ ಗಾಂಧಿಯವರ ಸಲಹೆ ಕೇಳಿದರೆಂದ ಮೇಲೆ ಅವರು ಈ ಮಾತುಕತೆಗಳಲ್ಲಿ ಎಂಥ ಮಹತ್ವದ ಭೂಮಿಕೆಯನ್ನು ಧರಿಸಿದ್ದರೆಂಬದು ಸ್ವಯಂವೇದ್ಯವಾದೀತು. ಆದರೆ ಶತಪ್ರಯತ್ನ ಮತ್ತು ಪರಮಾವಧಿ ಸೌಹಾರ್ದ ಪ್ರದರ್ಶನ ಮಾಡಿಯೂ ಮಂತ್ರಿತ್ರಯವಾಗಲಿ ವಾಯಿಸರಾಯರಾಗಲಿ ಮಹಾತ್ಮನ ಚಿತ್ತವೃತ್ತಿಯನ್ನು ಅರಿತುಕೊಳ್ಳಲು ಸಮರ್ಥರಾಗಲಿಲ್ಲ.

## ಅವರ ಶಂಕೆಗಳು

ತಮಗೆ ತಾವೇ ವಿವರಿಸಿಕೊಳ್ಳಲಾರದಂಥ ಶಂಕೆಗಳಿರುವದರಿಂದ ಗಾಂಧಿಯವರು, ಬ್ರಿಟಿಶ ಘಟನಾ ಸಮಿತಿ ಯೋಜನೆಯನ್ನು ಅಂಗೀಕರಿಸಬೇಕೇ ಬೇಡವೇ ಎಂಬದನ್ನು ಕಾಂಗ್ರೆಸ್ ಕಾರ್ಯಸಮಿತಿಯೇ ತನ್ನ ಪಾಡಿಗೆ ನಿರ್ಧರಿಸಿಕೊಳ್ಳಬೇಕೆಂದು ಸೂಚಿಸಿದರು. ಅದು ಯೋಜನೆಯನ್ನು ಅಂಗೀಕರಿಸಿದ ನಂತರ ತನ್ನ ಮನಸೂ ತಿರಸ್ಕಾರಕ್ಕಿಂತ ಹೆಚ್ಚಾಗಿ ಸ್ವೀಕಾರದ ಕಡೆಗೆ ಒಲೆದಿತ್ತೆಂದು ಅವರು ಬಿಚ್ಚಿಹೇಳಿದರು. ಮಾತ್ರವಲ್ಲ, ಘಟನಾ ಸಮಿತಿಯನ್ನು ವ್ಯವಹಾರದಲ್ಲಿ ಯಶಸ್ವಿಯಾಗುವಂತೆ ಮಾಡಲು ತಮ್ಮ ಪ್ರಭಾವವನ್ನೆಲ್ಲ ಬೀರುತಿದ್ದಾರೆ.

ನಡುಗಾಲ ಸರಕಾರದ ಇತಿಮಿತಿಗಳನ್ನರಿತಿದ್ದರೂ ಅಂತೆಯೆ ಜಿನ್ನಾರ ಲೀಗಿಗೆ ಸಂಬಂಧಪಡದ ಮುಸ್ಲಿಮನೊಬ್ಬನನ್ನು ಮಂತ್ರಿಯಾಗಿ ನೇಮಿಸಬೇಕೆಂದು ಹಟತೊಡಲು ಗಾಂಧಿಯವರು ಸಲಹೆ ಕೊಟ್ಟಿದ್ದರೂ ಕಾಂಗ್ರೆಸ್ ನಾಯಕರು ನಡುಗಾಲ ಯೋಜನೆಯಲ್ಲಿ ಸಹಕರಿಸುವ ಒಲವಿನಲ್ಲಿದ್ದರು. ಅದೇ ಪ್ರಕಾರ ಬ್ರಿಟಿಶ ಯೋಜನೆಯ ಎರಡೂ ಭಾಗಗಳನ್ನು ಸ್ವೀಕರಿಸಲು ನಿರ್ಧರಿಸಿ ಗೊತ್ತುವಳಿಯನ್ನು ಮರುದಿನ ಬರೆಯುವದಾಗಿ ಗೊತ್ತುಪಡಿಸಲಾಗಿತ್ತು. ಆದರೆ ಅಂದು ಸಂಜೆ ಜಿನ್ನಾರು ವಾಯಿಸರಾಯರನ್ನಾಗಲಿ ಮಂತ್ರಿ ರಾಯಭಾರಿಗಳನ್ನಾಗಲಿ ವಿಚಾರಿಸದೆ ತಮ್ಮ ಸಹಕಾರ ಬೇಕಾಗಿದ್ದರೆ ಮಂತ್ರಿಮಂಡಲದಲ್ಲಿ ಲೀಗೇತರ ಮುಸ್ಲಿಮನೊಬ್ಬನೂ ಇರಕೂಡದೆಂಬ ಕರಾರು ಹಾಕಿ ತಾವು ವಾಯಿಸರಾಯರೊಡನೆ ನಡೆಸಿದ ಪತ್ರವ್ಯವಹಾರದ ಆರಿಸಿದ ಅಂಶಗಳನ್ನು ಪ್ರಸಿದ್ಧಗೊಳಿಸಿದರು. ಬೇಕೆಂದೇ ಮಾಡಿದ ಈ ಆಹ್ವಾನದ ಪರಿಣಾಮವಾಗಿ, ಕಾಂಗ್ರೆಸ್ಸು ತನ್ನ ರಾಷ್ಟ್ರೀಯ ಸ್ವರೂಪಕ್ಕನುಗುಣವಾಗಿ ಬೇಕಾದವನನ್ನು ನೇಮಿಸಲು ಸ್ವತಂತ್ರವಿರಬೇಕೆಂಬ ಹಟವನ್ನು ಪುನಃ ತೊಡಬೇಕಾಗಿ ಬಂದು ರಾಷ್ಟ್ರೀಯ ಮುಸ್ಲಿಮನ ನೇಮಕದ ವಿಷಯದಲ್ಲಿ ಗಾಂಧಿಯವರ ಬೆಂಬಲಕ್ಕೆ ಕಾರ್ಯಸಮಿತಿಯ ಪ್ರತಿಯೊಬ್ಬ ಸದಸ್ಯನೂ ಎದ್ದು ನಿಲ್ಲುವಂತಾಯಿತು. ಈ ಪ್ರಶ್ನೆಯ ವಿಷಯದಲ್ಲಿಯೇ ನಡುಗಾಲ ಯೋಜನೆಯ ಮಾತುಕತೆ ಮುರಿದು ಅದರ ಸ್ಥಾಪನೆ ಅನಿರ್ದಿಷ್ಟ ಅವಧಿಯ ವರೆಗೆ ಮುಂದೆ ಬಿತ್ತು.

ಮುಸ್ಲಿಮನೊಬ್ಬನನ್ನು ನೇಮಿಸುವ ಕಾಂಗ್ರೆಸ್ಸಿನ ಹಕ್ಕಿಗೆ ಮನ್ನಣೆಯೀಯಬೇಕು, ಆದರೆ ಕಾಂಗ್ರೆಸ್ಸು ಆ ಹಕ್ಕನ್ನು ಆಚರಣೆ ತರತಕ್ಕದ್ದಲ್ಲ ಎಂಬ ನಡುಹಾದಿಯನ್ನೂ ಪೂರ್ಣ ತಿರಸ್ಕರಿಸಲಾಯಿತು. ಇದಕ್ಕೆ ಗಾಂಧಿಯವರನ್ನುತ್ತಾರೆ: ಆಯಕಟ್ಟಿನ ಕ್ಷಣದಲ್ಲಿ ಉಪಯೋಗಿಸಲು ಬಾರದಿದ್ದ ಹಕ್ಕು ಹಕ್ಕೇ ಅಲ್ಲ. ಕಾಂಗ್ರೆಸ್ಸು ರಾಷ್ಟ್ರೀಯ ಚಳವಳಿಯಾಗಿದ್ದು ಮಂತ್ರಿಗಳಲ್ಲಿ ದೇಶದ ವಿವಿಧ ಪಂಗಡಗಳ ಪ್ರತಿನಿಧಿಗಳನ್ನು ನೇಮಿಸುವ ತನ್ನ ಹಕ್ಕಿಗೆ ಇತಿಮಿತಿ ಹಾಕಲು ಅದು ಒಪ್ಪಿದರೆ ತನ್ನ ಮೂಲಭೂತ ತತ್ವಗಳಿಗೇ ಎರವಾದಂತಾಗುವದು.

## ಮೂಲ ತತ್ವಗಳನ್ನು ಸಡಲಿಸಬಾರದು

ಈ ನಿಲುಮೆಯಲ್ಲಿದೆ ಇನ್ನೂ ಅನೇಕ ಪ್ರಶ್ನೆಗಳ ಬಗೆಗೆ ಗಾಂಧಿಯವರ ನಡತೆಯ ಕೀಲಿಕೈ. ಅದುದರಿಂದ ಇದನ್ನು ಸಾವಧಾನಚಿತ್ತದಿಂದ ವಿಚಾರ ಮಾಡುವದು ಅವಶ್ಯ.

ಬ್ರಿಟಿಶ ರಾಯಭಾರಿಗಳ, ಏಕೆ ಇದರ ಅರಿವುಳ್ಳ ಯಾವನೇ ನ್ಯಾಯಶೀಲನ, ವಿಚಾರದಲ್ಲಿ ಮೇಲೆ ಸೂಚಿಸಿದ ನಡುಹಾದಿ ಅಂಗೀಕಾರಾರ್ಹವಾಗಿತ್ತು. ಆದರೆ ಗಾಂಧಿಯವರು ಒಪ್ಪಂದ ಮಾಡಿಕೊಳ್ಳಲು ಬಹಳ ಆತುರರಾಗಿದ್ದರೂ ಇದಕ್ಕೊಪ್ಪಿಕೊಳ್ಳಲಿಲ್ಲ.

ಬೇರಾವ ದೇಶದಲ್ಲಿನ ರಾಜಕಾರಣಿಯಾದರೂ ತನ್ನ ಶಾಶ್ವತ ತತ್ವಕ್ಕೆ ಧಕ್ಕೆಯೊದಗದಿದ್ದರೆ ತಾತ್ಪೂರ್ತಿಕ ಪ್ರಶ್ನೆಯನ್ನು ಸಡಿಲುಬಿಡಬಹುದು. ಆದರೆ ಶಾಶ್ವತ ಉಪಾಯವಾಗಿ ಯಾವುದು ಯೋಗ್ಯವಲ್ಲವೋ ಅದನ್ನು ತಾತ್ಕಾಲಿಕ ಯಶಸ್ಸಿಗಾಗಿ ತಾತ್ಪೂರ್ತಿಕವಾಗಿಯೂ ಗಾಂಧಿಯವರು ಒಪ್ಪಿಕೊಳ್ಳಲಾರರು. ಸತ್ಯಸಂಧತೆ ಮತ್ತು ಅಹಿಂಸಾಚರಣೆಯನ್ನು ಅವಲಂಬಿಸಿದ ಅವರು ಜೀವನದ ಕಡೆಗೆ ವಹಿಸಿದ ನೀತಿಗೆ ಈ ನಿಷ್ಠುರ ಧೋರಣೆ ಸರಿಯಾಗಿಯೆ ಇದೆ.

ಅಧ್ಯಾತ್ಮಿಕ ಮನುಷ್ಯನು ದೇವರೆಂಬ ಆ ಸರ್ವವ್ಯಾಪಿ ಸೃಷ್ಟಿಶಕ್ತಿಯೊಡನೆ ಎಲ್ಲಿ ಸಾಕ್ಷಾತ್ಕಾರವನ್ನು ಹುಡುಕುತಿರುತ್ತಾನೊ ಆ ದುರ್ಗಮ ವಿಚಾರ ಶಿಖರಗಳಲ್ಲಿ ಗಾಂಧಿಯವರ ನಿವಾಸ. ಈ ಉಚ್ಚಾವಸ್ಥೆಯಲ್ಲಿ ಅವರಿಗೆ ಅದೃಶ್ಯ, ಅಗಮ್ಯಗಳು ದಿನಬಳಿಕೆಯ ಪರಿಚಿತ ವಸ್ತುಗಳಾಗಿಬಿಟ್ಟಿವೆ. ಜಡವಾದಿಗೆ ಒಣ ಆಡಂಬರವೆಂದು ತೋರಬಹುದಾದ ಅಂತರ್ವಾಣಿ ಅಥವಾ ದೈವೀ ಪ್ರೇರಣೆ ಅವರಿಗೆ ನಿತ್ಯವೂ ಕೇಳಿಸುತಿರುತ್ತದೆ.

"ಅಗಮ್ಯದೊಡನೆ ನಾವು ವ್ಯವಹರಿಸಬೇಕಾದರೂ ಹೇಗೆ?" ಎಂದು ಮುಂಗಾಣದ ಬ್ರಿಟಿಶ ರಾಜಕಾರಣಿ ಕೇಳಬಹುದು. ಆದರೆ ಪಾರ್ಥಿವ ವಿಷಯಗಳ ಕುತೂಹಲತೆಯ ರಂಗಕ್ಕಿಳಿದಾಗ ಅವರು ಬ್ರಿಟಿಶ ಕಾಯಿದೆಯಲ್ಲಿ ನಿಷ್ಣಾತವಾಗಿರುವ ಕುಶಾಗ್ರ ಪೌರ್ವಾತ್ಯ ಬುದ್ಧಿಯ ಹಿಡಿತಕ್ಕೆ ಸಿಕ್ಕದ ತೀಕ್ಷ್ಣತೆಯನ್ನು ಪ್ರದರ್ಶಿಸುತ್ತಾರೆ.

"ಈ ಗಾಂಧಿಯಲ್ಲಿ ಎರಡು ಅಂಶಗಳಿವೆ—ಒಂದು ಋಷ್ಯಂಶ, ಇನ್ನೊಂದು ವಕೀಲನ ಅಂಶ" ಎಂದು ಅವರೊಡನೆ ಮಾತುಕತೆ ನಡೆಸಿದವರೊಬ್ಬರು ನನಗೆ ಹೇಳಿದರು. "ಯಾವುದೊಂದು ಕ್ಷಣದಲ್ಲಿ ಈ ಇಬ್ಬರು ಗಾಂಧಿಗಳಲ್ಲಿ ಯಾವ ಗಾಂಧಿಯೊಡನೆ ನೀವು ವ್ಯವಹರಿಸುತಿರುವಿರೆಂಬದನ್ನು ಗೊತ್ತುಹಚ್ಚುವದೇ ಕಠಿನ."

## ಒಂದೇ ಗಾಂಧಿ

ವಾಸ್ತವಿಕವಾಗಿ ಇರುವ ಗಾಂಧಿ ಒಬ್ಬನೆ, ಇಬ್ಬರಲ್ಲ! ಅಧ್ಯಾತ್ಮಿಕ ವಿಷಯಗಳಲ್ಲಿ ಅವರನ್ನು ಪ್ರೇರಿಸುವ ತತ್ವಗಳೇ ಪಾರ್ಥಿವ ಪ್ರಶ್ನೆಗಳಲ್ಲಿಯೂ ಅವರಿಗೆ ಮಾರ್ಗದರ್ಶಕವಾಗಿವೆ. ಅವರ ದುರ್ಗ್ರಾಹ್ಯವಾದ ವ್ಯಕ್ತಿತ್ವದ ಕೀಲಿಕೈಯಿದು: ಅವರ ಇಡಿ ಜೀವನವೇ ಅವ್ಯಯ ತತ್ವಗಳ ಆಧಾರದ ಮೇಲೆ ನಿಂತಿದೆ. ನಿತ್ಯ ವ್ಯವಹಾರದ ವ್ಯಾವಹಾರಿಕತೆಗೆ ಬೇಕಾದಂತೆ ಆ ತತ್ವಗಳನ್ನು ಹಿಗ್ಗಿಸುವದು ಕುಗ್ಗಿಸುವದು ಅವರಿಂದಾಗುವದಿಲ್ಲ. ಪ್ರತಿ ಸಂಗತಿಯನ್ನೂ ಅವರು ಈ ಅವ್ಯಯ ತತ್ವಗಳ ಮಾನದಿಂದಲೇ ಅಳೆದು ತೀರ್ಮಾನಿಸುತ್ತಾರೆ. ಆ ಅಳತೆಗೆ ಕೊರೆಯಾದುದನ್ನು ಅವರು ಅಂಗೀಕರಿಸಬಹುದೆಂಬ ಆಶೆಯೇ ಇಲ್ಲ. ಯಾವ ರಾಜಕಾರಣಿಯಾದರೂ ತಾನು ಮಹತ್ತೆಂದು ಬಗೆಯುವ ಗುರಿಯ ಸಾಧನೆಗಾಗಿ ತತ್ವಗಳನ್ನು ಮಾತ್ರವಲ್ಲ ಸತ್ಯವನ್ನು ಕೂಡ ತುಸು ಸಡಿಲುಬಿಡಲು ಸಿದ್ಧನಾಗಬಹುದು. ಗಾಂಧಿಯವರು ಹಾಗಲ್ಲ.

ಅವರ ಅವ್ಯಯ ತತ್ವದ ಒರೆಗೆ ನಿಲ್ಲದ ಯಾವುವೇ ಸೂಚನೆಗಳನ್ನು ತೆಗೆದುಕೊಂಡು ಹೋಗಿ ಗಾಂಧಿಯವರೊಡನೆ ಒಪ್ಪಂದ ಮಾಡಿಕೊಳ್ಳುವದು ಅಸಾಧ್ಯ ಕೆಲಸವೆಂದು ಈಗಾದರೂ ನಿಮಗೆ ಮನವರಿಕೆಯಾಯಿತೆ?

ಹಿಂದೀಯರೊಡನೆ ಮಾತುಕತೆ ನಡೆಸಲು ಹೋದ ಮೂವರು ಮಂತ್ರಿಗಳಂಥ ಮತ್ತು ಅಲ್ಲಿ ನಮ್ಮ ಪ್ರತಿನಿಧಿಯಾದ ಸೈನಿಕ ವಾಯಿಸರಾಯರಂಥ ಸಮರ್ಥ ಮುತ್ಸದ್ದಿಗಳ ಗುಂಪನ್ನು ಬೇರೆ ಕಂಡುಹಿಡಿಯುವದು ದುಸ್ಸಾಧ್ಯವೆಂದು ತೋರುತ್ತದೆ. ಗಾಂಧಿಯವರಿಗೆ ಅವರ ಉಚ್ಚ ಧ್ಯೇಯಗಳ ಹಾಗು ಅವುಗಳ ಬಗ್ಗೆ ಅವರಲ್ಲಿರುವ ಪ್ರಾಮಾಣಿಕ ವಿಶ್ವಾಸದ ವಿಷಯಕ್ಕೆ ಬಹಳ ಅಭಿಮಾನವಿದೆ. ಜಗತ್ತಿನ ಬೇರೆ ಬೇರೆ ಭಾಗಗಳಲ್ಲಿ ಉಬ್ಬರಿಸುತ್ತಿರುವ ತೊಡಕುಗಳಿಂದ ಪೀಡಿಸಲ್ಪಡುತಿದ್ದರೂ ಸರಿಯಾದ ಕೆಲಸವನ್ನೇ ಮಾಡಲು ಹಾತೊರೆಯುತಿರುವ ಬ್ರಿಟಿಶ ಕೂಲಿಕಾರ ಸರಕಾರದಲ್ಲಿ ಅವರ ಸಹಾನುಭೂತಿ ವಿಶೇಷವಾಗಿದೆ.

"ಆದರೆ ಈ ಉದಾತ್ತ ಬುದ್ಧಿಯ ನಾಲ್ವರು ಮಹನೀಯರು ಅಥವಾ ಬ್ರಿಟಿಶ ಕೂಲಿಕಾರ ಸರಕಾರ ಕೂಡ, ಬೇಕಾದ್ದು ಬರಲಿ, ಸರಿಯಾದುದನ್ನೇ ಮಾಡಿ ತೀರುವ ಸಾಮರ್ಥ್ಯವನ್ನು ತೋರುವರೆ, ಎಂಬುದೇ ನನ್ನ ಸಂದೇಹ," ಎಂದು ಗಾಂಧಿಯವರು ನನಗೆ ಹೇಳಿದರು.

ಇಲ್ಲಿದೆ ಸೀಕಲಾಟ. ಇವರೆಲ್ಲರೂ ಸಾಮ್ರಾಜ್ಯವಾದದ ಕೆಸರಲ್ಲಿ ಪೂರ್ಣವಾಗಿ ಕಾಲು ಸಿಗಿಸಿಕೊಂಡಿರುವದರಿಂದ ತಾವೆಷ್ಟೇ ಆತುರ ಪಟ್ಟರೂ ಹೆಣಗಿದರೂ ಅದರಿಂದ ಪಾರಾಗಲಾರರೆಂದು ಗಾಂಧಿಯವರು ಹೇಳುತ್ತಾರೆ. ಅವಶ್ಯಬಿದ್ದರೆ ಇತರ ಪಕ್ಷಗಳನ್ನು ಮನ ನೋಯಿಸಲು ಕೂಡ ಅವರು ಸಿದ್ಧರಾಗಬೇಕು. ಅಷ್ಟೇಕೆ ಬ್ರಿಟಿಶ ಜನರು ತಮ್ಮ ನಾಡು "ಪುಟ್ಟ ಇಂಗ್ಲಂಡ" ಆಗುವದರಲ್ಲೆ ಸಂತುಷ್ಟರಾಗಿ "ಇತರರ ಹೆಗಲಿಂದ ಇಳಿಯಲು" ಒಪ್ಪಬೇಕು, ಎನ್ನುವರು ಗಾಂಧಿ."

ಇದರಲ್ಲಿ ತೊಡಕು ಬೇರಾವದೂ ಇಲ್ಲ—ಆದರೆ ಗಾಂಧಿಯವರು ಯೋಗ್ಯವಾದ ಕೆಲಸ ಮಾಡಬೇಕೆನ್ನುವಾಗ ಪರಮಾತ್ಮ ಸಾಕ್ಷಾತ್ಕಾರ ಹೊಂದಿದ ತಮ್ಮ ಭಾವನೆಗೆ ಯಾವುದು ಯೋಗ್ಯವೆಂದು ತೋರುವದೋ ಅದೇ ಎಂದು ಅವರ ಅಭಿಪ್ರಾಯವಿರುತ್ತದೆ. ಹಿಂದುಸ್ತಾನದಲ್ಲಿ ಸರಿಯಾದುದನ್ನು ಮಾಡುವದೆಂದರೆ, ಅವರ ಅಭಿಪ್ರಾಯದಲ್ಲಿ, ದೇಶವನ್ನು ಸ್ವಾತಂತ್ರ್ಯಕ್ಕೆ ಒಯ್ದು ಮುಟ್ಟಿಸಲು ಹುಟ್ಟಿರುವ ಕಾಂಗ್ರೆಸಿಗೆ ಅಧಿಕಾರವನ್ನು ಒಪ್ಪಿಸುವದು.

## ಅಲ್ಪಸಂಖ್ಯಾಕ ಸಮಸ್ಯೆ

ಇದೀಗ ಕಠೋರ ವಸ್ತುಸ್ಥಿತಿ. ಇದರ ಮುಂದೆ ಕಣ್ಣುಕಣ್ಣು ಬಿಟ್ಟು ಫಲವಿಲ್ಲ. ಸಾವ ಪ್ರಜಾತಂತ್ರಾತ್ಮಕ ಪದ್ಧತಿಯಿಂದ ಬಹುಸಂಖ್ಯಾಕ ಪಕ್ಷಕ್ಕೆ ಅಧಿಕಾರವನ್ನು ಒಪ್ಪಿಸುವದಲ್ಲದೆ ಬೇರಾವ ತರಹೋಪಾಯವೂ ಇಲ್ಲೆಂದು ನನ್ನ ಮನಸಿಗೆ ಖಚಿತವಾಗಿದೆ.

"ಆದರೆ ಮುಸ್ಲಿಮರ ಹಾಗು ಇತರ ಚಿಕ್ಕ ಅಲ್ಪ ಸಂಖ್ಯಾಕರ ಕಥೆಯೇನು" ಎಂದು ನೀವು ಕೇಳಬಹುದು.

ಕಾಂಗ್ರೆಸಿಗನು ಇದಕ್ಕೆ ನಿರ್ದಾಕ್ಷಿಣ್ಯವಾಗಿ ಉತ್ತರ ಕೊಡುತ್ತಾನೆ. "ಅವರು ನಮ್ಮ ಸಹ ದೇಶಬಂಧುಗಳು ನಮಗೆ ನಮ್ಮ ವ್ಯವಹಾರವನ್ನು ವ್ಯವಸ್ಥಿತ ಗೊಳಿಸುವ ಅಧಿಕಾರ ಸಿಕ್ಕಾಗ ಅವರನ್ನು ನಾವು ಔದಾರ್ಯದಿಂದ ನಡೆಸಿಕೊಳ್ಳುವೆವೆಂದು ನೀವು ನಂಬಬಹುದು. ಅದು ನಮ್ಮ ಸನಸ್ಯೆ ಹೊರತು ನಿಮ್ಮದಲ್ಲ. ನಿಮ್ಮ ಸಮಸ್ಯೆಯೆಂದರೆ ವ್ಯವಸ್ಥೆಯಿಂದ ಅಧಿಕಾರವನ್ನು ಬಿಟ್ಟುಕೊಡುವದು ಮಾತ್ರ. ಉಳಿದುದರ ಗೊಡವೆ ನಿಮಗೆ ಬೇಡ."

ಚರ್ಚಿಲ್ಲರೂ ಕೆಲ ಕೂಲಿಕಾರ ಹಾಗೂ ಪ್ರಾಗತಿಕ ರಾಜಕಾರಣಿಗಳೂ ಇದು ನಮ್ಮ ಕೆಲಸವೆಂದು ವಾದಿಸಬಹುದು. ಆದರೆ ಮೊನ್ನೆ ಕಾಮನ್ಸ ಸಭೆಯಲ್ಲಿ ಈ ವಿಷಯ ಚರ್ಚೆ ನಡೆದಾಗ ೫೦ ಸದಸ್ಯರ ಉಪಸ್ಥಿತರಾಗಿದ್ದುದನ್ನು ನಾನು ಎಣಿಸಿ ನೋಡಿದೆ. ಹಿಂದುಸ್ತಾನದ ಆಂತರಿಕ ಪ್ರಶ್ನೆ ನಮ್ಮ ಕೆಲಸವಾಗಿದ್ದರೆ ಮತ್ತು ಅದರಲ್ಲಿ ನಮ್ಮ ರಾಷ್ಟ್ರಕ್ಕೆ ಆಸ್ಥೆಯಿದ್ದದು ನಿಜವಾಗಿದ್ದರೆ ಉಳಿದ ೫೫೦ ಸದಸ್ಯರು ಸಭೆಗೆ ಬಾರದೆ ಇದ್ದು ತಮ್ಮ ಸ್ಥಾನಗಳನ್ನು ಉಳಿಸಿಕೊಳ್ಳಲು ಸಾಧ್ಯವಿತ್ತೆ?

## ಮುಸ್ಲಿಂ ಲೀಗು ಪ್ರತ್ಯಕ್ಷ ಹೋರಾಟ ಹೂಡಿದರೆ—

(೧ನೇ ಪುಟದಿಂದ ಮುಂದರಿದುದು)

ಮಾಡಿ, ತಾವು ಒಪ್ಪಿಕೊಂಡಿರುವ ದೀರ್ಘಾವಧಿ ಯೋಜನೆಯನ್ನು ಅಕ್ಷರಶಃ ಪಾಲಿಸುವದಾಗಿ ಭರವಸೆ ಕೊಡುವದು. ಈ ಯೋಜನೆಯ ವಿಶಿಷ್ಟಭಾಗಗಳ ಭಾಷ್ಯದಲ್ಲಿ ವಿವಾದಾಸ್ಪದವಾದ ಅಂಶಗಳನ್ನು ಫೆಡರಲ್ ಕೋರ್ಟ ಅಥವಾ ಬೇರಾವ ಸಮರ್ಥ ನ್ಯಾಯಮಂಡಲದ ಮಧ್ಯಸ್ಥಿಕೆಗೆ ಒಪ್ಪಿಸಿ ಸರ್ವಸಮ್ಮತವಾಗುವಂತೆ ತೀರ್ಮಾನಿಸಬಹುದು. ಜಿನ್ನಾಸಾಹೇಬರೂ ಅವರ ಸಹಯೋಗಿಗಳೂ ಹಟ ಬಿಡದಿದ್ದರೆ ಅಥವಾ ಅಯೋಗ್ಯ ಬೇಡಿಕೆಗಳನ್ನು ಮುಂದೊಡ್ಡಿದರೆ ಇಲ್ಲವೆ ಕಾಂಗ್ರೆಸ್ಸು ಅನುಲ್ಲಂಘ್ಯವೆಂದಿಟ್ಟುಕೊಂಡ ತತ್ವಗಳನ್ನು ಬಿಟ್ಟುಬಿಡಬೇಕೆಂದರೆ ಆಗ ಕಾಂಗ್ರೆಸ್ಸು ತನ್ನ ಕೈಲಾದಷ್ಟು ಚೆನ್ನಾಗಿ ತಾನೇ ಹೊಣೆಯನ್ನು ನಿರ್ವಹಿಸಬೇಕು. ಆಗ ಪ್ರತಿಯೊಬ್ಬ ಕಾಂಗ್ರೆಸ್ಸಿಗನೂ ತಾನು ಕೇವಲ ರಾಷ್ಟ್ರೀಯನಾಗಿರುವೆನೆಂಬುದನ್ನು ಎಂದಿಗಿಂತ ಹೆಚ್ಚಾಗಿ ಮನಸಿನಲ್ಲಿಟ್ಟುಕೊಂಡು ಸಂಕುಚಿತ ಜಾತೀಯತೆಯಲ್ಲಿ ಮುಳುಗದಂತೆ ನೋಡಿಕೊಳ್ಳಬೇಕು. ಬಹುಸಂಖ್ಯಾಕರು ರಾಷ್ಟ್ರೀಯತೆಗೆ ಗಟ್ಟಿಯಾಗಿ ಅಂಟಿಕೊಂಡರೆ ಮುಸ್ಲಿಮರು ತಮಗೂ ಅದೇ ತರಹೋಪಾಯವೆಂದು ಕಂಡುಕೊಳ್ಳುವ ದಿನ ದೂರವಿರಲಾರದು. ಆಗ ಈ ಎರಡು ಜನಸಮೂಹಗಳ ನಡುವಣ ಅಂತರಾಳ ಶಾಶ್ವತವಾಗಿ ಇಲ್ಲದಂತಾಗುವದು.





ಕರ್ಮವೀರ
ಹರಿಜನ ಪುರವಣಿ

# ಮಹಾದೇವ ದೇಸಾಯಿ

ಮಮತೆಯ ಗೆಳೆಯನೂ ಸಹಯೋಗಿಯೂ ಆಗಿದ್ದ ಮನುಷ್ಯನನ್ನು ಕುರಿತು ಬರೆಯುವ ಕೆಲಸ ಕಠಿನ. ಅವನೊಡನೆ ಎಷ್ಟೋ ಅಂತರಂಗದ ನೆನಹುಗಳು ಹೆಣೆದಿರುತ್ತವೆ. ಅವನನ್ನು ಕುರಿತು ಯೋಚನೆ ಮಾಡತೊಡಗಿದೊಡನೆ ಈ ನೆನಹುಗಳು ಚಿಗಿತು ಗತಕಾಲವನ್ನು ಕಣ್ಣಿಗೆ ಕಟ್ಟುತ್ತವೆ ಕಳೆದು ಹೋದ ದಿನಗಳ ಚಿತ್ರಗಳ ಮೆರವಣಿಗೆಯೊಂದು ಕಣ್ಮುಂದೆ ಸರಿಯತೊಡಗುತ್ತದೆ.

ಜೀವನದಲ್ಲಿ ನಾವೆಷ್ಟೋ ಸಂಗತಿಗಳನ್ನು, ಗೆಳೆಯರನ್ನು ಕೂಡ ಸ್ವಯಂಸಿದ್ಧವೆಂದು ಪರಿಗ್ರಹಿಸಿಬಿಡುತ್ತೇವೆ. ಮಹಾದೇವರು ನಮ್ಮಲ್ಲಿ ಹಲವರ ಪಾಲಿಗೆ ಒಂದು ಬಗೆಯ ಸಂಸ್ಥೆಯೆ ಆಗಿಬಿಟ್ಟಿದ್ದರು. ಪ್ರಶಾಂತರೂ ಸಮರ್ಥರೂ ಕುಶಲರೂ ಕಾರ್ಯನಿರತರೂ ತನ್ನನ್ನೆ ತಾ ಮರೆಯುವ ಸ್ವಭಾವದವರೂ ಏಕನಿಷ್ಠರೂ ಆದ ಮಹಾದೇವರನ್ನು ಅರಿತರಿತಂತೆ ನಮ್ಮ ಮನಸಿನಲ್ಲಿ ಅವರಿಗಾಗಿ ಪ್ರೇಮಾದರಗಳು ಹೆಚ್ಚುತಿದ್ದವು. ಹೆಚ್ಚು ಕಡಿಮೆ ಕಾಲು ಶತಮಾನ ಕಾಲದ ಪರಿಚಯ ನಮ್ಮಿಬ್ಬರದು. ಇಬ್ಬರೂ ಎಷ್ಟೋ ಕಾರ್ಯಗಳಲ್ಲಿ ಒಟ್ಟಾಗಿ ದುಡಿದಿದ್ದೆವು. ಕೈಹಾಕಿದುದನ್ನೆಲ್ಲ ಅವರು ಸರಿಯಾಗಿ ಆಮೂಲಾಗ್ರವಾಗಿ ಮಾಡಿ ಮುಗಿಸುತಿದ್ದರು. ಪಂಡಿತದೃಷ್ಟಿಯುಳ್ಳವರಾಗಿದ್ದರೂ ಅವರು ತಮ್ಮ ಮಾನವ ಸಹಜ ಅನುಕಂಪೆಯಿಂದ ಮನಸನ್ನು ಒಲಿಸಿಕೊಳ್ಳುತಿದ್ದರು. ಅದುದರಿಂದ ಅವರ ಬಗೆಗೆ ನಮ್ಮ ಪ್ರೇಮ, ಅಭಿಮಾನಗಳು ಬೆಳೆದವು; ಒಮ್ಮಿಂದೊಮ್ಮೆ ಅವರು ಇಲ್ಲದಂತಾದಾಗ ಎಲ್ಲವೂ ಶೂನ್ಯವಾಯಿತು, ಬರಿದೋ ಬರಿದಾಯಿತು; ಒಂದು ಬಗೆಯ ನಿರುತ್ಸಾಹ ನಮ್ಮನ್ನು ಆವರಿಸಿಬಿಟ್ಟಿತು. ನಮ್ಮ ಜೀವನದ, ನಮ್ಮ ಕಾರ್ಯದ ಬಹು ದೊಡ್ಡ ಅಂಗವೇ ಅಗಿಹೋಗಿದ್ದವನು ಕಣ್ಮರೆಯಾಗಿದ್ದನು; ಪ್ರೀತಿಯ ಗೆಳೆಯನೊಬ್ಬನು ಹೊರಟುಹೋಗಿದ್ದನು; ಅವನ ಸ್ಥಳವನ್ನು ತುಂಬುವವರಾರೂ ಇದ್ದಿಲ್ಲ.

ಆದಗೂ ಅವರ ನೆನಹು ಇನ್ನೂ ಉಳಿದಿದೆ, ನಮಗೆ ಕಸುವನ್ನು ಕೊಡುತಿದೆ—ಏಕೆಂದರೆ ಅಗ್ನಿಪರೀಕ್ಷೆಯ ದಿನಗಳು ಇನ್ನೂ ತೀರಿಲ್ಲ, ಭವಿತವ್ಯ ಕಷ್ಟಮಯವಾಗಿದೆ. ಈ ಸಮಯದಲ್ಲಿ ಜಾಣ್ಮೆಯ, ಗೆಳೆತನದ ಮಂತ್ರಾಲೋಚನೆ ಕೊಡುವ ಮಹಾದೇವರು ನಮ್ಮ ಬಳಿ ಇದ್ದಿದ್ದರೆ!

ವರ್ಧಾ ಜವಾಹರಲಾಲ ನೆಹರು
ಅಗಸ್ಟ ೧೦, ೧೯೪೬

# ಅವನು ಅಮರ

ಮಹಾದೇವ ದೇಸಾಯಿಯ ನಾಲ್ಕನೇ ಪುಣ್ಯತಿಥಿಯ ಈ ಸಮಯದಲ್ಲಿ ಆತನ ಅನೇಕಾನೇಕ ಸವಿ ಹಾಗೂ ದುಃಖಾಂತ ನೆನಪುಗಳು ನನ್ನ ಹೃನ್ಮನಗಳನ್ನು ಮುತ್ತುತ್ತವೆ. ಅವನ ಸ್ನೇಹ ಒಂದು ಭಾಗ್ಯ; ಅವನ ಸಹವಾಸ ಒಂದು ಸಂತೋಷ.

ಮಹಾದೇವನು ಆಗ ತಾನೇ ೨೫ ವರ್ಷದ ನವತರುಣ. ಅಪರಿಮಿತ ಸಂಪತ್ತು ಗಳಿಸಿ ಸುಖಲೋಲುಪನಾಗಲಿಕ್ಕೆ ಇಡೀ ಪ್ರಪಂಚವೇ ಅವನಿಗಾಗಿ ಬಾಗಿಲು ತೆರೆದು ಕಾದು ನಿಂತಿತ್ತು. ಆದರೂ ಮಹಾತ್ಮರ ಮಾಯಾಮಂತ್ರವು ಅತನನ್ನು ಮುಗ್ಧಗೊಳಿಸಿತು. ರಾಷ್ಟ್ರಸೇವೆಯ ದೀಕ್ಷಾಬದ್ಧನಾಗಿ ಶಿಷ್ಯತ್ವವನ್ನು ಸ್ವೀಕರಿಸಿದ. ಸುಗಂಧ ಪರಿಮಳದಂತೆ ಘಮಘಮಿಸುವ ನವ ತಾರುಣ್ಯ, ಅಸಾಧಾರಣ ಪಾಂಡಿತ್ಯ, ಅಸಾಮಾನ್ಯ ಸಾಹಿತ್ಯಾಭಿರುಚಿ ಅಗ್ನಿತೀಯ ರಾಷ್ಟ್ರಭಕ್ತಿ ಮೊದಲಾದ ಅಲೌಕಿಕ ಸದ್ಗುಣಗಳಿಂದ ತುಂಬಿದ ತನ್ನ ಚಿನ್ನ ಭಾಂಡಾರವನ್ನು ಬಂದ ದಿನವೇ ಗುರುವಿನ ಪಾದತಲದಲ್ಲರ್ಪಿಸಿ ಕಾಲು ಶತಮಾನದ ವರೆಗೂ ಅತ್ಯಂತ ಭಕ್ತಿಪೂರ್ವಕವಾಗಿ ಸೇವೆ ಸಲ್ಲಿಸಿದನು.

ಮಹಾತ್ಮರ ಶಿಷ್ಯನಿದ್ದಾಗ ಅದೆಷ್ಟು ಅವನ ಕಾರ್ಯ ವೈವಿಧ್ಯ!

ಈ ಸಮಯದಲ್ಲಿ ಮಹಾದೇವನ ಅಸಂಖ್ಯ ಚಿತ್ರಗಳು ಅತ್ಯಂತ ವೇಗದಿಂದ ನನ್ನ ಕಣ್ಮುಂದೆ ಹಾದು ಹೋಗುತ್ತವೆ: ಸಾಬರಮತಿ, ವರ್ಧಾ, ಮತ್ತು ಸೇವಾಗ್ರಾಮ ಆಶ್ರಮಗಳಲ್ಲಿ ಪ್ರಮುಖ ಆಶ್ರಮವಾಸಿಯೆನಿಸಿದ್ದ ಆ ಮಹಾದೇವ; ಹಗಲು-ರಾತ್ರಿ ಕುಲು ಕುಲು ನಗುವ ಆ ದುಂಡು ಮುಖದ ಮಹಾದೇವ; ಪ್ರೇಮಾಭಿಮಾನಿಗಳ ಪರಿವಾರದಲ್ಲಿ ಕುಳಿತು ನಕ್ಕು ನಲಿಸುವ ಆ ಮಹಾದೇವ; ಗುರುವಿನ ಇಲ್ಲವೆ ತನ್ನ ಸುಂದರ ವಿಚಾರಗಳನ್ನು ಅಷ್ಟೇ ಸುಂದರವಾದ ಭಾಷೆಯಲ್ಲಿ ನಿರಾಯಾಸವಾಗಿ ಬರೆಯುತ್ತ ಕುಳಿತಿರುವ ಆ ಮಹಾದೇವ; ಮುಗಿಲು ಬಣ್ಣದ ಶಾಲನ್ನು ಹೊದ್ದು ವಿಶೇಷ ದೂತನಾಗಿ ವ್ಹಾಯಿಸರಾಯ ಭವನದ ಮೆಟ್ಟಲುಗಳನ್ನು ಸಾವಧಾನವಾಗಿ ಹತ್ತುತ್ತಿರುವ ಆ ಮಹಾದೇವ; ಮಹಾತ್ಮರು ಲಂಡನದಲ್ಲಿ ರಾಜಾತಿಥ್ಯಕ್ಕೆ ಹೊರಟಾಗ ಅವರನ್ನು ನೆರಳಿನಂತೆ ಅನುಸರಿಸುತಿದ್ದ ಆ ಮಹಾದೇವ; ಮಹಾತ್ಮರ ವಿಚಾರಗಳನ್ನು ತಿಳಿದುಕೊಳ್ಳಲು ಯುರೋಪ, ಅಮೇರಿಕಾ, ಏಶಿಯಾ ಖಂಡಗಳಿಂದ ಬಂದ ಕುತೂಹಲಿಗಳನ್ನು ತನ್ನ ಅಮೃತವಾಣಿಯಿಂದ ತಣಿಸುವ ಆ ಮಹಾದೇವ-ಹೀಗೆ ಒಂದಲ್ಲ ನೂರಾರು ಚಿತ್ರಗಳು ಕ್ಷಣಾರ್ಧದಲ್ಲಿ ಕೋಲ್ಮಿಂಚಿನಂತೆ ಸೆಳೆದು ಮಾಯವಾಗುತ್ತವೆ.

ಆದರೆ ಇವೆಲ್ಲವುಗಳಿಗಿಂತ ಅನಂತ ಕಾಲದ ವರೆಗೆ ಅಚ್ಚಳಿಯದೆ ಉಳಿವ ಅವನ ಅಂತ್ಯ ಕಾಲದ ದೃಶ್ಯ ಇನ್ನೂ ನನ್ನ ಕಣ್ಣಮುಂದೆ ಕಟ್ಟಿದೆ. ಚಿರಸ್ಮರಣೀಯ ಅಗಸ್ಟ ಒಂಭತ್ತನೇ ದಿನ ನಮ್ಮನ್ನು ಬಂಧಿಸಿ ಆಗಾಖಾನ ಅರಮನೆಗೆ ಕರೆದೊಯ್ದಾಗ ಮುಂಬರುವ ಅದಾವುದೋ ಅದೃಶ್ಯ ಭೀತಿಯಿಂದ ಮಹಾದೇವನ ಮನಸು ಖಿನ್ನವಾಗಿತ್ತು. ಮಹಾತ್ಮರು ಮೇಲಿಂದ ಮೇಲೆ ಆಡಿತೋರಿಸುತಿದ್ದ ಆಮರಣ ಉಪವಾಸವು ಸ್ಥಾನಬದ್ಧತೆಯಲ್ಲಿ ನಿಜವಾಗಿ ಪರಿಣಮಿಸಬಹುದೆಂಬ ಚಿಂತೆ ಅವನನ್ನು ಆವರಿಸಿತ್ತು. ಅಗಸ್ಟ ೧೪ ನೇ ರಾತ್ರಿ, ನಮ್ಮ ಆ-ಸೆರೆಮನೆಯಲ್ಲಿ ಗಂಭೀರ ಶಾಂತಿ ಪಸರಿಸಿದ್ದಾಗ ಮಹಾದೇವನು ನನ್ನ ಕೋಣೆಯಲ್ಲಿ ಬಹಳ ಹೊತ್ತು ಕುಳಿತು, ಅವಸರವಿದ್ದವರಂತೆ ವಿಲಕ್ಷಣ ರೀತಿಯಲ್ಲಿ ಮಾತಾಡಿದನು. ಸ್ವಂತ ಜೀವನದ ಚರಿತ್ರೆ, ಪತ್ನೀ, ಪುತ್ರರ ಸಹವಾಸದ ಅನುಭವ ಮೊದಲಾದ ವಿಷಯಗಳನ್ನು ಕುರಿತು ಅವನು ಸಂಭಾಷಿಸಿದನು. ಅದರೂ ತಾನು ಪರಮಾತ್ಮನ ಸಾಕ್ಷಾತ್ಕಾರವನ್ನು ಕಾಣುತಿದ್ದ ಮಹಾತ್ಮಾ ಗಾಂಧಿಯವರೇ ಚರ್ಚೆಯ ಮುಖ್ಯ ವಿಷಯವಾಗಿದ್ದರು. ಒಟ್ಟಿನಲ್ಲಿ, ದೈವಯೋಗವು ಅವನನ್ನು ಆ ರಾತ್ರಿ ರಾಕ್ಷಸನ ಹಾಗೆ ಪೀಡಿಸುವಂತೆ ನನಗೆ ಭಾಸವಾಯಿತು.

ಆದರೆ ಮರುದಿನ ಬೆಳಿಗ್ಗೆ ಅವನು ಒಳ್ಳೇ ಹಸನ್ಮುಖಿಯಾಗಿ ಚಂಡಿನಂತೆ ಪುಟಿಯುತ್ತಿರುವದನ್ನು ಕಂಡು ನನಗೆ ಆಶ್ಚರ್ಯವಾಯಿತು. ಮಹಾತ್ಮರೊಡನೆ ತೋಟದಲ್ಲಿ ಗಾಳಿ ಸವಾರಿ ಮಾಡಿ ಬಂದು, "ಇವತ್ತು ನಾನು ಇಷ್ಟೇಕೆ ಸಂತೋಷದಿಂದಿರುವೆನೆಂಬದು ನನಗೇ ಗೊತ್ತಿಲ್ಲ" ಎಂದು ನನ್ನೆದುರು ಹೇಳಿದನು. ಅನಂತರ ಸ್ವಲ್ಪ ಹೊತ್ತಿನಲ್ಲಿ, ತುಟಿಗಳ ಮೇಲೆ ತಿಳಿ ಹಾಸ್ಯವನ್ನು ಸೂಸುತ್ತ ಡಾಕ್ಟರನ್ನು ಕಾಣುವದಕ್ಕೆ ನನ್ನ ಕೋಣೆಗೆ ಬಂದನು ಅವನ ಮುಖದ ಮೇಲಿನ ನಗು ಇನ್ನೂ ಇಳಿದಿದ್ದಿಲ್ಲ; ಅಷ್ಟರಲ್ಲೆ, "ನನ್ನ ತಲೆ ತಿರುಗುತ್ತದೆ" ಎಂದನು. ಅದನ್ನು ನಾವು ಕೇಳುವಷ್ಟರಲ್ಲಿ ಅವನ ಪ್ರಾಣ ಪಕ್ಷಿ ನಮ್ಮ ಆರ್ತನಾದಕ್ಕೆ ನಿಲುಕದಷ್ಟು ದೂರ ಹಾರಿಹೋಗಿತ್ತು.

ಅತ್ಯಂತ ದುಃಖಿತನಾದ ಆತನ ಗುರು ತನ್ನ ಶಿಷ್ಯೋತ್ತಮನ ಅಂತ್ಯಕ್ರಿಯೆ ನೆರವೇರಿಸಿದ ಕರುಣಾಜನಕ ದೃಶ್ಯವನ್ನು ವರ್ಣಿಸುವ ಸಾಮರ್ಥ್ಯ ನನ್ನ ಲೆಕ್ಕಣಿಕೆಯಲ್ಲಿಲ್ಲ. ಗಾಂಧೀಜಿಯು ತನ್ನ ನಡುಗುವ ಕೈಗಳಿಂದ ಸಂಗಮವರಿ ಕಲ್ಲಿನಂತೆ ಶೀತಲವಾದ ಆ ಮೃತ ಶರೀರವನ್ನು ತೊಳೆದು, ಗಂಧವನ್ನು ಲೇಪಿಸಿ ಮತ್ತು ಹೂಗಳಿಂದ ಅಲಂಕರಿಸಿ, "ಮಹಾದೇವ, ನೀನು ನನಗಾಗಿ ಈ ಕಾರ್ಯ ಮಾಡುವಿಯೆಂದು ನಾನು ಭಾವಿಸಿದ್ದೆ. ಆದರೆ ವಿಧಿ ವಿಲಾಸದಿಂದ ನಾನೇ ನಿನಗಾಗಿ ಮಾಡಬೇಕಾಗಿದೆ" ಎಂದು ಮೆಲು ದನಿಯಲ್ಲಿ ಉಸುರಿದರು. ಅಗಸ್ಟ ೧೫ ನೇ ದಿನ ಮಧ್ಯಾಹ್ನ ಚಿಕ್ಕ ಪರಿವಾರದ ಪ್ರೇತಯಾತ್ರೆ ಹೊರಟು ಅರಮನೆಯ ಆವಾರದ ಮೂಲೆಯೊಂದರಲ್ಲಿದ್ದ ಸ್ಮಶಾನಕ್ಕೆ ಬಂದು ತಲುಪಿತು..... ಪ್ರಾತಃಕಾಲ ಜೀವಜ್ಯೋತಿಯಾಗಿದ್ದ ದೇಹ ಸಾಯಂಕಾಲ ಹಿಡಿ ಭಸ್ಮವಾಯಿತು.

ಮಹಾದೇವನು ಕಣ್ಮರೆಯಾಗಿದ್ದಾನೆ, ಆದರೆ ಮಹಾದೇವನು ನಿಜವಾಗಿಯೂ ಅದೃಶ್ಯನಾಗಿರುವನೇ? ತನ್ನ ಗುರುವಿನ ಪ್ರೇಮ ಸರೋವರದಲ್ಲಿ ಕಮಲದಂತೆ ಕಂಗೊಳಿಸುವದಿಲ್ಲವೇ? ತ್ಯಾಗಪೂರ್ವಕವಾಗಿ ಸೇವೆ ಸಲ್ಲಿಸಿದ ತನ್ನ ರಾಷ್ಟ್ರದ ಹೃದಯಸಿಂಹಾಸನದಲ್ಲಿ ರಾರಾಜಿಸುವದಿಲ್ಲವೇ?

ಅಗಸ್ಟ ೧೨, ೧೯೪೬ — ಸರೋಜಿನಿ ನಾಯುಡು

## ಬಾಷ್ಪಾಂಜಲಿ

ಪ್ರೇಮಪುತ್ಥಳಿ ಮಹಾದೇವ ದೇಸಾಯಿಯು ಗತಿಸಿ ನಾಲ್ಕು ವರ್ಷಗಳಾದವು. ಅದರೂ ಅವನ ಅಗಲುವಿಕೆಯಿಂದುಂಟಾದ ದುಃಖ ಇನ್ನೂ ಶಮನವಾಗಿಲ್ಲ. ಗಾಂಧೀಜಿ ನಮ್ಮ ಜೀವನದಲ್ಲಿ ಅವಶ್ಯಕ ವ್ಯಕ್ತಿ. ಮಹಾದೇವನ ನಿಧನದಿಂದ ಅವರದೊಂದು ಮಹತ್ವದ ಅಂಗವಿಚ್ಛೇದವಾಗಿದೆಂದು ನನಗನಿಸುತ್ತದೆ. "ನಮ್ಮ ಜೊತೆಯಲ್ಲಿ ಮಹಾದೇವನಿಲ್ಲವಲ್ಲ" ಎಂದೆನಿಸದ ದಿನ ಒಂದೂ ಇಲ್ಲ ಅವನಿಂದ ಬರಿದಾದ ಸ್ಥಳ ತುಂಬುವದು ಕಠಿಣ. ಪರರ ಕಾರ್ಯದಲ್ಲಿ ಮಗ್ನರಾಗಿ ನಮ್ಮ ದುಃಖವನ್ನು ಅನೇಕ ಪ್ರಸಂಗಗಳಲ್ಲಿ ಮರೆಯಬಹುದು. ಆದರೆ ಮಹಾದೇವನನ್ನು ಮರೆಯುವದು ಸಾಧ್ಯವಿಲ್ಲ. ಗಾಂಧೀಜಿಯ ಸೇವೆಯ ಮುಖಾಂತರ ಅತನು ರಾಷ್ಟ್ರಕ್ಕೆ ಸಲ್ಲಿಸಿದ ಅಪಾರ ಸೇವೆ ಇನ್ನೊಬ್ಬರಿಂದ ಸಾಧ್ಯವಿಲ್ಲ.

೧೨-೮-೪೬ ಚ. ರಾ.

## ಆತನ ಅತ್ಯುತ್ತಮ ಗುಣ

ದಿವಂಗತ ಮಹಾದೇವ ದೇಸಾಯಿಯ ಅತ್ಯುತ್ತಮ ಗುಣವೆಂದರೆ ಪ್ರಸಂಗ ಬಂದಾಗ ತನ್ನನ್ನೇ ಶೂನ್ಯಕ್ಕೆ ಇಳಿಸಿಕೊಂಡು ಬಿಡುವ ಆತನ ಯೋಗ್ಯತೆಯೆಂದು ನನ್ನ ತಿಳುವಳಿಕೆ.

ಸೇವಾಗ್ರಾಮ ಮೋ. ಕ. ಗಾಂಧಿ
೧೨—೮—೪೬

## ಟೀಕೆಟಿಪ್ಪಣೆಗಳು

### ಕೊಲೆಗೆ ಪರಿಹಾರವೆ?

ಸ್ವರ್ಗವಾಸಿ ಛಾಯೀ ರಾಜಬಲಿಯವರ ಕೊಲೆಗಾಗಿ ಅವರ ಸಮೀಪ ಬಂಧುಗಳು ಸರಕಾರದಿಂದ ಧನರೂಪದ ಪರಿಹಾರವನ್ನು ಕೇಳಬೇಕೇ ಬೇಡವೇ ಎಂದು ನನ್ನನ್ನು ಕೇಳಲಾಗಿದೆ. ಸ್ವತಃ ಮೃತರೇ ಇಂಥ ಮರಣವನ್ನೊಂದು ಹಾನಿಯೆಂದು ತಿಳಿದುಕೊಳ್ಳುತ್ತಿದ್ದಿಲ್ಲ. ವಾಸ್ತವಿಕವಾಗಿ ಇಂಥ ಕೊಲೆಗಳಿಗೆ ಯಾವದೇ ಪ್ರತೀಕಾರ ಮಾಡದೆ ಹೋದರೇನೇ ಕೊನೆಗೆ ಅವು ಶಂಕಾವೆ ನಿಂತು ಹೋಗುತ್ತವೆ. ಪರಿಹಾರವನ್ನು ಅಥವಾ ಪ್ರತಿಹಿಂಸೆಯನ್ನು ಅಪೇಕ್ಷಿಸಿದ ತಕ್ಷಣ ಮಹತ್ತಾದ ಸ್ವೇಚ್ಛಾಪೂರ್ವಕವಾದ ಬಲಿದಾನದ ಮಹತಿ ಅಳಿದು ಹೋಗುವದು. ಆಗ ಮೃತನ ಆತ್ಮಕ್ಕೆ ಏನು ಶಾಂತಿ?

ಕೊಲೆಗೆ ಮರುಕೊಲೆಯಿಂದಾಗಲಿ ಪರಿಹಾರ ಧನದಿಂದಾಗಲಿ ಪ್ರಾಯಶ್ಚಿತ್ತ ಮಾಡುವದು ಸಾಧ್ಯವಿಲ್ಲ. ಪ್ರತೀಕಾರಾಪೇಕ್ಷೆಯಿಲ್ಲದೆ ತನ್ನನ್ನು ಬಲಿಯಾಗಿ ಒಪ್ಪಿಸಲು ಮನವಾರೆ ಸಿದ್ಧವಾಗುವದೊಂದೇ ಕೊಲೆಗೆ ಪ್ರಾಯಶ್ಚಿತ್ತ ಕೊಡುವ ಹಾದಿ. ಈ ತತ್ವದಲ್ಲಿ ವಿಶ್ವಾಸವುಳ್ಳವರಾರೂ ತಮ್ಮ ಬಂಧುಬಳಗದವರ ಮರಣಕ್ಕೆ ಪರಿಹಾರ ದ್ರವ್ಯವನ್ನು ಬೇಡುವ ಅಥವಾ ತೆಗೆದುಕೊಳ್ಳುವ ಮಾತನ್ನು ಮನಸಿನಲ್ಲಿ ಕೂಡ ತರಲಾರರು. ಜೀವಕ್ಕೆ ಜೀವ ತೆಗೆದುಕೊಳ್ಳುವ ತತ್ವದಿಂದ ತದ್ವಿರುದ್ಧವಾಗಿ ಕೊಲೆಗಳು ಹೆಚ್ಚುತ್ತಹೋಗುವವು ಸೇಡಾಗಲಿ ಪರಿಹಾರದ್ರವ್ಯವಾಗಲಿ ವ್ಯಕ್ತಿಗೆ ಅಲ್ಪ ಸ್ವಲ್ಪ ಸಮಾಧಾನವನ್ನುಂಟುಮಾಡಬಹುದು. ಆದರೆ ಅದರಿಂದ ಸಮಾಜದಲ್ಲಿ ಶಾಂತಿ ನೆಲೆಸುವದಾಗಲಿ ಅದು ಉದ್ಧಾರವಾಗುವದಾಗಲಿ ಅಶಕ್ಯವೆಂದು ನನ್ನ ದೃಢವಾದ ಅಭಿಪ್ರಾಯ.

ಪ್ರತಿಹಿಂಸೆಯು ನಿಯಮ ರೂಢವಾಗಿರುವ ಸಮಾಜದಲ್ಲಿ ವ್ಯಕ್ತಿಯ ಕರ್ತವ್ಯವೇನು? ಇದಕ್ಕೆ ಉತ್ತರ ಉಪದೇಶದಲ್ಲಿಲ್ಲ, ಆಚರಣೆಯಲ್ಲಿದೆ. ಮತ್ತು ಯಾರು ಅನ್ಯಾಯಕ್ಕೆ ಗುರಿಯಾಗಿರುವರೊ ಅವರು ಮಾತ್ರ ಆಚರಣೆಯಿಂದ ಮೇಲ್ಪಂಕ್ತಿ ಹಾಕಿಕೊಡಬಲ್ಲರು. ಆದುದರಿಂದ ಕೊನೆಯ ನಿರ್ಣಯ ಛಾಯಿ ರಾಜಬಲಿಯವರ ಬಂಧುಗಳ ಕೈಯಲ್ಲಿದೆ. ನಾನು ಕಂಡ ಅಹಿಂಸೆಯ ಹಾದಿಯನ್ನು ತೋರಿಸಿಕೊಡುವದಷ್ಟೇ ನನ್ನ ಕರ್ತವ್ಯವಾಗಿತ್ತು.

(ಹರಿಜನಬಂಧುವಿನಿಂದ)
ಸೇವಾಗ್ರಾಮ ಮೋ. ಕ. ಗಾಂಧಿ
೯—೮—೪೬

### ದಕ್ಷಿಣ ಆಫ್ರಿಕೆ

ದಕ್ಷಿಣ ಆಫ್ರಿಕೆಯಲ್ಲಿಯ ಹಿಂದೀ ಒಕ್ಕಲಿಗರ ವೀರ ಸಂಗ್ರಾಮವು ಅಪ್ರತಿಹತ ಉತ್ಸಾಹದಿಂದ ಮುಂದುವರಿದಿದೆ. ಈ ಹೋರಾಟವು ದೀರ್ಘ ಹೋರಾಟವಾಗುವ ಲಕ್ಷಣಗಳಿವೆ. ಪ್ರತೀಕಾರಗಳ ಯಾತನೆಯು ದೀರ್ಘವಾದಷ್ಟು ಅವರ ಕೀರ್ತಿಯೂ ಪ್ರತಿಫಲವೂ ಬೆಳೆಯುವದು. ದೀರ್ಘ ಯಾತನೆಯ ನಿಜ ಲಕ್ಷಣವೇ ಅದು. ದಕ್ಷಿಣ ಆಫ್ರಿಕೆಯ ಸರಕಾರವು ಬುದ್ಧಿಪೂರ್ವಕವಾಗಿ ಮಾಡಿದ ಈ ಕಾಯಿದೆಯು ವೀರ ಸ್ತ್ರೀ ಪುರುಷರ ಯಾತನೆಗಳ ಮೂಲಕ ಒಮ್ಮೆಲೆ ಪಲ್ಲಟವಾಗಲಾರದು. ಹೋರಾಟಗಾರರ ಉತ್ಸಾಹಭಂಗವನ್ನು ಮಾಡುವ ಉದ್ದೇಶದಿಂದ ನಾನು ಈ ಮಾತನ್ನು ಹೇಳುತ್ತಿಲ್ಲ. ಆದರೆ ಹೆಚ್ಚಿನ ಹಾಗೂ ದೀರ್ಘ ಸಮಯದ ಕಷ್ಟ ಸಹನೆಗೆ ಅವರನ್ನು ಗಟ್ಟಿಗೊಳಿಸಲು ಹೇಳುತ್ತಿದ್ದೇನೆ. ಈ ಹೋರಾಟವು ಬೇಗ ಮುಗಿಯುವದೆಂಬ ಆಸೆಯನ್ನಿಟ್ಟುಕೊಳ್ಳಬಾರದೆಂದು ಅವರ ಧುರೀಣರು ಇಲ್ಲಿಗೆ ಬಂದಾಗ ಅವರಿಗೆ ನಿಚ್ಚಳವಾಗಿ ತಿಳಿಸಿದೆ. ಕಷ್ಟ ಸಹಿಸುವವನಿಗೆ ಕಾಲವು ಆವಾಗಲೂ ಅನುಕೂಲವಾಗಿರುತ್ತದೆ. ಯಾಕೆಂದರೆ ಯಾತನೆಯು ಸಾಗಿದಂತೆ ದಬ್ಬಾಳಿಕೆಯು ಉಗ್ರವಾಗುತ್ತ ನಡೆದು ಅದರ ಕರಾಳ ಸ್ವರೂಪವು ಬಯಲಿಗೆ ಬರುತ್ತದೆ. ನಿಜವಾಗಿ ವಿಚಾರ ಮಾಡಿದರೆ ಅದು ಎಂದೂ ದೀರ್ಘವಾಗುವದಿಲ್ಲ. ಪ್ರತಿ ಫಲವು ನಿಶ್ಚಿತವಾಗಿರುವಾಗ ತಮ್ಮ ಹೋರಾಟವು ದೀರ್ಘಕಾಲದ ಹೋರಾಟವಾಗಲಿ ಅಥವಾ ಅಲ್ಪಾವಧಿಯ ಹೋರಾಟವಾಗಲಿ ಕಷ್ಟಸಹಿಷ್ಣುಗಳು ನಿರಾಶರಾಗುವ ಕಾರಣವಿಲ್ಲ.

# ವಾರದ ಪತ್ರ

"ನನ್ನ ವಿಧಾನ ನಕಾರಾತ್ಮಕ ಅಥವಾ ನಿಷೇಧಾತ್ಮಕವಾದುದೆಂದು ನೀವೆನ್ನುತ್ತೀರಿ" ಗೆಳೆಯನೊಬ್ಬನು ಗಾಂಧೀಜಿಯೊಡನೆ ವಾದಿಸತೊಡಗಿದ "ಆದರೆ ನನ್ನ ಮನಸ್ಸಿನಲ್ಲಿ ಎಲ್ಲವೂ ನಿಚ್ಚಳವಾಗಿದೆ. ಕಾಂಗ್ರೆಸ್ ವರಿಷ್ಠರು ಬ್ರಿಟಿಶರಾಯಭಾರದೊಡನೆ ಮಾತುಕತೆ ನಡೆಸುವದಕ್ಕೆ ನನ್ನ ಅಡ್ಡಿಯಿಲ್ಲ. ಆದರೆ ಒಂದುವೇಳೆ ಆ ಮಾತುಕತೆಗಳು ವಿಫಲವಾದವೆಂದಿಟ್ಟುಕೊಳ್ಳೋಣ. ಆಗ ಗತಿಯೇನು? ಈ ಸ್ಥಿತಿಯಲ್ಲಿ ಕೈಕೊಳ್ಳಬೇಕಾದ ಕ್ರಮ ಎಕೆ ಸರಕಾರ ಸನ್ನಾಹ ಮಾಡಿಯೆ ಇಟ್ಟಿದೆ. ನಾವು ಮಾತ್ರ ಮಾಡಿಲ್ಲ. ಸ್ವಾತಂತ್ರ್ಯ ಗಳಿಸುವ ಮೊದಲ ಇನ್ನೊಂದು ಹೋರಾಟವನ್ನು ಹೂಡಬೇಕಾಗುವದೆಂದು ನನ್ನ ನಂಬಿಕೆ. ನಿಮ್ಮಲ್ಲಿ ಕ್ರಾಂತಿಕಾರಿ ಮನೋಭಾವವಿದೆಯೆಂದು ನನಗೆ ಗೊತ್ತು. ಹಿಂಸೆಯಲ್ಲಿ ನಿಮಗಿರುವದಕ್ಕಿಂತ ಹೆಚ್ಚಿನ ಪ್ರೀತಿ ನನಗಿಲ್ಲ. ಅದು ದುಷ್ಟವಸ್ತು ನಿಮ್ಮ ಗುರಿಯೇ ನನ್ನ ಗುರಿ. ನಮ್ಮ ಸ್ವಾತಂತ್ರ್ಯ ಧ್ಯೇಯವನ್ನು ನಿಶ್ಚಿತ ಅವಧಿಯೊಳಗೆ ಕೈಗೂಡಿಸುವ ಖಚಿತವಾದ ಅಹಿಂಸಾತ್ಮಕ ಉಪಾಯವನ್ನು ತೋರಿಸಿರಿ,—ನಿಮ್ಮ ಬೆನ್ನ ಹಿಂದೆ ಸಂತೋಷದಿಂದ ಬರುವೆ. ಒಂದು ರೀತಿಯಲ್ಲಿ ನಾನೂ ಅಹಿಂಸೆಯಲ್ಲಿ ನಂಬಿಕೆಯುಳ್ಳವನೇ. ೧೯೩೦-೩೨ ಮಾದರಿಯ ಹೋರಾಟದಿಂದ ಫಲವಿಲ್ಲ. ಪ್ರಾರಂಭದಲ್ಲಿಯೇ ಮುಂದಾಳುಗಳೆಲ್ಲ ಸೆರೆಮನೆಯನ್ನು ಸೇರಿ ಬಿಡುವರು ಮತ್ತು ಅವರಿಗೂ ಜನತೆಗೂ ಇರುವ ಸಂಪರ್ಕ ಪೂರ್ಣವಾಗಿ ಹರಿದು ಹೋಗುವದು. ನಾವು ಸ್ವತಃ ಸೆರೆಮನೆಗಳಲ್ಲಿ ಹೆಚ್ಚುಕಡಿಮೆ ಸುರಕ್ಷಿತವಾಗಿ ಕುಳಿತುಕೊಂಡು, ಜನರು ಗೋಳೀಬಾರನ್ನು ಎದುರಿಸಬೇಕೆಂದು ಅಪೇಕ್ಷಿಸುವದು ಯೋಗ್ಯವಲ್ಲ. ಮುಂದಾಳುಗಳೂ ಕಷ್ಟಗಳನ್ನು ಅನುಭೋಗಿಸಬೇಕು. ಒಬ್ಬರ ಬಳಿಕೊಬ್ಬರಂತೆ ಆಮರಣ ಉಪವಾಸವನ್ನು ಕೈಕೊಳ್ಳುವ ನೂರುಜನ ಪರಮೋಚ್ಚ ಕಾಂಗ್ರೆಸ್ ಮುಂದಾಳುಗಳ ಯಾದಿಯೊಂದು ಸಿದ್ಧವಾಗಲಿ; ಅದರಲ್ಲಿ ನಿಮ್ಮ ಹೆಸರು ಮೊಟ್ಟಮೊದಲು ಬರಲಿ; ಸರಕಾರಕ್ಕೆ ಯೋಗ್ಯ ಮುನ್ನೆಚ್ಚರಿಕೆ ಕೊಡೋಣ; ಹಾಗಾದರೆ ಆ ಯಾದಿ ಪೂರ್ಣ ಮುಗಿದುಹೋಗುವ ಮೊದಲೇ ಹಿಂದುಸ್ತಾನಕ್ಕೆ ಸ್ವಾತಂತ್ರ್ಯ ಸೇರಿ ಬಿಡುವದು ಎಂದು ನನಗೆ ವಿಶ್ವಾಸವುಂಟು." ಇಂಥ ಪ್ರಸಂಗದಲ್ಲಿ ತಾನು ತನ್ನ ಸ್ವಂತ ಕಾರ್ಯಕ್ರಮವನ್ನು ಬಿಟ್ಟುಕೊಟ್ಟು ಈ ಉಪವಾಸ ಮಾಲಿಕೆಯಲ್ಲಿ ಸೇರಲು ಸಿದ್ಧನಿರುವದಾಗಿ ಆ ಗೆಳೆಯ ಹೇಳಿದನು. ಅತ್ತ ನೂರುಗಟ್ಟಲೆ ಜನಸಾಮಾನ್ಯರು ಈಚೆಗಿನ ಕೆಲವು ವರ್ಷಗಳಲ್ಲಿ ಪೋಲೀಸರ ಮತ್ತು ಮಿಲಿಟರಿಯವರ ಕೈಯ ಲಾಠಿ ಮತ್ತು ಗುಂಡಿನೇಟುಗಳಿಗೆ ಬಲಿಯಾಗಿರುವಾಗ, ಜಯರಾಮದಾಸ ದೌಲತರಾಮರನ್ನು ಬಿಟ್ಟರೆ ಬೇರಾವನೊಬ್ಬ ಮೇಲ್ಪಟ್ಟದ ಕಾಂಗ್ರೆಸ್ ನಾಯಕನೂ ಒಂದೇ ಒಂದು ಗುಂಡಿನೇಟನ್ನು ತಿಂದಿಲ್ಲವೆಂದು ಆ ಗೆಳೆಯ ದೂರಿದನು.

ಕೊನೆಯ ವಿಷಯವನ್ನು ಎತ್ತಿಕೊಂಡು ಗಾಂಧೀಜಿ ಉತ್ತರವಿತ್ತರು: "ಕರೆ ಬಂದಾಗ, ಬಂದರೆ, ಬೇರೆ ಯಾರಾದರೂ ನನ್ನೊಡನೆ ಸೇರಲಿ ಬಿಡಲಿ, ನಾನು ಆಮರಣ ಉಪವಾಸವನ್ನು ಕೈಕೊಂಡೇ ತೀರುವವನು. ಆಮರಣ ಉಪವಾಸವೆಂಬುದು ಸತ್ಯಾಗ್ರಹದ ಬತ್ತಳಿಕೆಯಲ್ಲಿನ ಕೊನೆಯ ಹಾಗೆಯೆ ಅತ್ಯಂತ ತೀಕ್ಷ್ಣ ಅಸ್ತ್ರ. ಅದೊಂದು ಪವಿತ್ರ ವಸ್ತು. ಆದರೆ ಅದನ್ನು ಹಿರಿಯುವವನು ಅದರ ಸಮಸ್ತ ಧ್ವನಿ ಸಂಕೇತಗಳನ್ನೂ ಗ್ರಹಿಸಿಯೆ ಆ ಕೆಲಸ ಮಾಡಬೇಕು. ಬರಿ ಉಪವಾಸಕ್ಕೇ ಯಾವ ಬೆಲೆಯೂ ಇಲ್ಲ; ಬೆಲೆಯಿರುವದು ಅದರ ಸಂಕೇತಕ್ಕೆ. ಕಪಟಿಗಳು ಕೂಡ ಉಪವಾಸದ ನಟನೆ ಮಾಡುವದನ್ನು ನಾವು ಕಂಡಿಲ್ಲವೆ? ಅಂಥ ಉಪವಾಸಗಳನ್ನು ಒಂದು ಪಿಡುಗು, ಉಪದ್ರವ ಎಂದು ಕರೆಯಬೇಕು. ಅವುಗಳಿಗೇನೂ ಬೆಲೆಯಿಲ್ಲ ನಾನು ಉಪವಾಸವನ್ನು ಕೈಕೊಂಡಲ್ಲಿ ನನ್ನ ಸಂಗಡ ಪರಿಶುದ್ಧ ಹೃದಯದಿಂದ ಅದರಲ್ಲಿ ಭಾಗವಹಿಸುವ ಒಂದು ನೂರು ಜನರನ್ನು, ಏಕೆ ಬರಿ ಹತ್ತು ಜನರನ್ನಾದರೂ ನೀವು ಕಳಿಸುವಿರಾದರೆ ನನಗಾಗಬಹುದಾದ ಆನಂದ ಅಷ್ಟಿಷ್ಟಲ್ಲ. ಆದರೆ ಅಂಥ ಉಪವಾಸವನ್ನು ಸೆರೆಮನೆಯಲ್ಲಿ ಕೈಕೊಳ್ಳತಕ್ಕದ್ದಲ್ಲ."

"ಬರಿ ಸೆರೆಮನೆಗೆ ಹೋದರೆ ಸಾಲದೆಂದಿಷ್ಟೇ ನನ್ನ ಭಾವ. ನಾವು ಹೊರಗುಳಿದು ದಬ್ಬಾಳಿಕೆಯನ್ನು ಎದುರಿಸಬೇಕು. ಪಾಟಣಾದ ಸೆಕ್ರೆಟೇರಿಯಟ್ ಮುಂದೆ ಒಂಭತ್ತು ಜನ ಎಳೆಯ ಹುಡುಗರು ಗುಂಡಿನೇಟಿಗೆ ಎದೆಗೊಟ್ಟು ಸತ್ತರು. ಈ ಬಡಹುಡುಗರ ಬದಲು ರಾಜೇಂದ್ರ ಬಾಬುಗಳು ಹೀಗೆ ಮಾಡಿದ್ದರೆಂದುಕೊಳ್ಳಿರಿ: ಆಗ ಜನತೆಯಲ್ಲಿ ಎಂಥ ವಿದ್ಯುತ್‌ಸಂಚಾರವಾಗುತಿತ್ತೆಂದು ಕಲ್ಪಿಸಿಕೊಳ್ಳಿರಿ" ಸಂದರ್ಶಕನು ಪುನಃ ನುಡಿದನು.

"ಇಲ್ಲಿ ನೀವೆನ್ನುವದಕ್ಕೆ ನಾನು ಪೂರ್ಣ ಒಪ್ಪಿದೆ. ಬರಿ ಸೆರೆಮನೆಗಳನ್ನು ತುಂಬಿ ಫಲವಿಲ್ಲೆಂದು ನಾನು ಈ ಮೊದಲು ಹೇಳಿದ್ದುಂಟು. ಶುದ್ಧಾಂತಃಕರಣಿಗಳು ಸೆರೆಮನೆಗೆ ಹೋಗುವದರಿಂದ ಮಾತ್ರ ಸ್ವರಾಜ್ಯ ಬರಬಲ್ಲದು. ನಿಜವಾಗಿ, ೧೯೨೨ ರಲ್ಲಿ ನಾನು ಸೆರೆಮನೆಗೆ ಹೋದಾಗ, ನನ್ನ ಹಿಂದೆ ಯಾರೂ ಸೆರೆಮನೆಗೆ ಹೋಗಬಾರದೆಂದೂ ವಿಧಾಯಕ ಕಾರ್ಯಕ್ರಮವನ್ನು ಪರಿಪೂರ್ಣವಾಗಿ ಆಚರಿಸುತ್ತ ಹೋಗಬೇಕೆಂದೂ ನಾನು ಆದೇಶವಿತ್ತಿದ್ದೆ. ಅಷ್ಟಾದಶ ವಿಧ ವಿಧಾಯಕ ಕಾರ್ಯಕ್ರಮವನ್ನು ಸಂಪೂರ್ಣವಾಗಿ ನಡೆಸಿದರೆ, ನನ್ನ ಅಭಿಪ್ರಾಯದಲ್ಲಿ, ಶಾಸನಭಂಗದ ಅವಶ್ಯಕತೆಯೇ ಬೀಳಲಾರದು. ೧೯೨೨ ರಲ್ಲಿ ಬಾರ್ಡೋಲಿಯ ಜನರು ವಿಧಾಯಕ ಕಾರ್ಯಕ್ರಮವನ್ನು ಆಚರಣೆಗೆ ತರುವೆವೆಂದು, ತಮ್ಮಲ್ಲಿಂದ ಅಸ್ಪೃಶ್ಯತೆಯನ್ನೂ ಮದ್ಯವನ್ನೂ ಹೊರಗಟ್ಟುವೆವೆಂದು, ಹಿಂದೀ ಗಿರಣಿಗಳದೇ ಇರಲಿ ವಿದೇಶಿಯೆ ಇರಲಿ ಎಲ್ಲ ಗಿರಣಿ ಬಟ್ಟೆಯನ್ನು ಬಹಿಷ್ಕರಿಸಿ ಖಾದಿಯನ್ನು ಸಾರ್ವತ್ರಿಕವಾಗಿ ಮಾಡುವೆವೆಂದು ಮಾತು ಕೊಟ್ಟಿದ್ದರು. ಆದರೆ ಅವರ ಪ್ರತಿಜ್ಞೆ ಇಂದಿಗೂ ಪೂರೈಸಲ್ಪಡದೆ ಉಳಿದಿದೆ."

"ಸೆರೆಮನೆಗೆ ಹೋದುದರಿಂದ ಹೋರಾಟ ಮುಗಿದಂತಾಗಲಿಲ್ಲವೆಂದು ನೀವೆನ್ನುತ್ತೀರಿ" ವಾದಿ ಮುಂದೆ ಸಾಗಿದ. "ರಾಜಕೀಯ ಕೈದಿಗಳನ್ನು ವರ್ಗಗಳಾಗಿ ವಿಂಗಡಿಸುವ ರೂಢಿಯನ್ನು ಕಿತ್ತುಹಾಕಬೇಕೆಂದು ಚಳವಳಿ ಹೂಡಲು ನಾವು ಬಯಸಿದ್ದೆವು. ಇದಕ್ಕಾಗಿ ಮೇಲಿನ ವರ್ಗದ ಸೆರೆಯಾಳುಗಳು ವಿಶಿಷ್ಟ ಸೌಕರ್ಯಗಳನ್ನು ತಿರಸ್ಕರಿಸುವ ಮೂಲಕ ತಮ್ಮನ್ನು ಸ್ವೇಚ್ಛೆಯಿಂದ 'ಸಿ' ವರ್ಗದ ಕೈದಿಗಳಾಗಿ ಮಾರ್ಪಡಿಸಿಕೊಳ್ಳಬೇಕೆಂದು ಸೂಚಿಸಿದೆವು. ಆದರೆ ಕೆಲವರು ಇದು ನಿಮ್ಮ ತತ್ವಕ್ಕೆ ವಿರುದ್ಧವಾಗಿದೆಯೆಂದು ಹೇಳತೊಡಗಿದರು. ಯಾರನ್ನು ಯಾವ ವರ್ಗದಲ್ಲಿ ಸೇರಿಸಲಾಗಿದೆಯೋ ಅವರು ಆ ವರ್ಗದಲ್ಲಿಯೆ ಉಳಿಯಬೇಕೆಂದು ನೀವು ಹೇಳಿದ್ದಿರಂತೆ."

"ಇದು ಸತ್ಯಕ್ಕೆ ದೂರವಾದ ಮಾತು," ಗಾಂಧೀಜಿ ಉತ್ತರಿಸಿದರು. "ನಿಜವಾಗಿ ರಾಜಕೀಯ ಮತ್ತು ರಾಜಕೀಯೇತರ ಕೈದಿಗಳ ನಡುವೆ ಕೂಡ ಪರಿಭೇದ ಬೇಡೆಂಬವನು ನಾನು. ಎಲ್ಲ ಕೈದಿಗಳಿಗೂ ನ್ಯಾಯವಾದ ಮತ್ತು ಮಾನವಯೋಗ್ಯವಾದ ಸೌಕರ್ಯ ದೊರೆಯಬೇಕೆಂದು ನನ್ನ ಮತ. ಆದರೆ ನನ್ನ ದನಿ ಅರಣ್ಯರೋದನವಾಯಿತು. ಅಧಿಕಾರ ನಮ್ಮ ಕೈಯಲ್ಲಿ ಇದ್ದಾಗ ಕೂಡ ಈ ವರ್ಗೀಕರಣವನ್ನು ಕಿತ್ತು ಹಾಕಲು ನಮ್ಮಿಂದಾಗಲಿಲ್ಲ. ಸತ್ಯಾಗ್ರಹದ ಅಂಗವಾಗಿ ಸೆರೆಮನೆಗೆ ಹೋಗುವ ಪರಿಪಾಠದ ಜನಕನು ನಾನೆ. ನನ್ನ ಸೆರೆಮನೆ ಗಮನ ಅಹಿಂಸೆಯಿಂದ ಹುಟ್ಟಿದ್ದು. ಅಹಿಂಸೆಗೂ ಪಂಕ್ತಿಪರಿಭೇದಕ್ಕೂ ಹೊಂದಿಕೆಯಿಲ್ಲ. ನಾನು ಸೆರೆಮನೆಯೊಳಗಿಂದಲೇ ಸರಕಾರದೊಡನೆ ಹೋರಾಡಿರುವೆ. ಇಂದು ಎಲ್ಲ ಬಗೆಯ ಜನರೂ ಸೆರೆಮನೆಗೆ ಹೋಗುವವರೆ. ಸೆರೆಮನೆಯಲ್ಲಿ ಅವರು ಹೇಗೋಹೇಗೋ ನಡೆದುಕೊಳ್ಳುತ್ತಾರೆ, ಕೆಲವರಂತೂ ಕ್ಷಮೆ ಬೇಡಿ ಹೊರಗೆ ಬರುವದುಂಟು. ಸೆರೆಮನೆಗೆ ಹೋಗುವದೊಂದು ಮಕ್ಕಳಾಟಿಕೆಯಾಗಿಬಿಟ್ಟಿದೆ."

## ಸಂಪಿನ ಪಿಡುಗು

"ಸಂಪುಗಳ ವಿಷಯದಲ್ಲಿ ಏನು ಮಾಡಬೇಕು?" ಒಂದು ಕಾಂಗ್ರೆಸ್ ಪ್ರಾಂತದ ಮುಖ್ಯಮಂತ್ರಿಗಳು ಗಾಂಧೀಜಿಯೊಡನೆ ಸದ್ಯದ ಸಂಪಿನ ಪಿಡುಗನ್ನು ಕುರಿತು ಚರ್ಚಿಸುತ್ತ ಕೇಳಿದರು. ಒಂದು ವಿಶಿಷ್ಟ ಸಂಪು ಅನಾವಶ್ಯಕವಾಗಿ ನಡೆದಿದ್ದುದರಿಂದ ಅವರಿಗೆ ತುಂಬ ವಿಷಾದವಾಗಿತ್ತು.

"ಕಾಂಗ್ರೆಸ್ಸಿಗೆ ಜನತೆಯ ಮೇಲಿದ್ದ ಹಿಡಿತ ತಪ್ಪಿ ಹೋಗಿದೆಯೆಂದು ಇದರ ಅರ್ಥವೆ?" ಗಾಂಧೀಜಿ ಕೇಳಿದರು.

"ಹಾಗಲ್ಲ. ಆದರೆ ಕಾಂಗ್ರೆಸ್ಸಿನಲ್ಲಿ ಈ ವಿಷಯದಲ್ಲಿ ಏಕವಾಕ್ಯತೆಯಿಲ್ಲ. ಇದರಿಂದ ಜನತೆಯ ಮನಸಿನಲ್ಲಿ ತುಂಬ ಗೊಂದಲವೆದ್ದಿದೆ."

"ಸಂಪು ಅನ್ಯಾಯದ್ದಾಗಿದ್ದರೆ ಅದನ್ನು ನಿಸ್ಸಂದಿಗ್ಧ ಶಬ್ದಗಳಲ್ಲಿ ಖಂಡಿಸಬೇಕು" ಗಾಂಧೀಜಿ ಸೂಚಿಸಿದರು.

"ಯಾರು ?"

"ಕಾಂಗ್ರೆಸ್ಸು, ಮತ್ತಾರು ?"

"ಕಾಂಗ್ರೆಸ್ ಎಂದರೆ ಯಾರೆಂದು ನಿಮ್ಮ ಅಭಿಪ್ರಾಯ?" ಆ ಗೆಳೆಯರು ಕೇಳಿದರು. "ಕಾರ್ಯಸಮಿತಿ ಇದನ್ನು ಮಾಡಬಹುದಾಗಿತ್ತು, ಮಾಡಿಲ್ಲ."

"ಕಾಂಗ್ರೆಸ್ ಎಂದರೆ, ಕಾರ್ಯ ಸಮಿತಿಯ ಮುಖಾಂತರ ಹಿಂದುಸ್ತಾನದ ನಾಲ್ವತ್ತು ಕೋಟಿ ಜನರು, ಎಂಬುದು ನನ್ನ ಅಂತರ್ಯ."

ಉಗ್ರಮತವಾದಿನಿಯೊಬ್ಬಳು ಅಲ್ಲಿಯೆ ಇದ್ದಳು ಆಕೆ ನಡುವೆ ಬಾಯಿ ಹಾಕಿದಳು: "ನೀವು ಆರಿಸಿ ದೇಶದ ಮೇಲೆ ಹೊರಿಸಿದ ಕಾರ್ಯಸಮಿತಿಯ ಸದಸ್ಯವರ್ಗದ ಭಿನ್ನಭಿನ್ನಾಭಿಪ್ರಾಯದ ಪ್ರಾಣ್ಯದಿಂದ ಕಾರ್ಯಸಮಿತಿಯಿಂದು ಒಂದೇ ದನಿಯಿಂದ ಮಾತಾಡಲಾರದಾಗಿದೆ ನೀವು ಪ್ರಜಾತಂತ್ರವನ್ನು ಬಾಯಿ ಮುಚ್ಚಿಸಿದ್ದೀರಿ."

ಸದ್ಯದ ಕಾರ್ಯಸಮಿತಿಯನ್ನು ಆರಿಸಿದವರು ತಾವಲ್ಲ, ಪ್ರಜಾತಂತ್ರಾತ್ಮಕವಾಗಿ ಆರಿಸಲ್ಪಟ್ಟ ಕಾಂಗ್ರೆಸ್ ಅಧ್ಯಕ್ಷರು ಎಂಬದಾಗಿ ಗಾಂಧೀಜಿ ಆಕೆಗೆ ವಿವರಿಸಿದನು. ವ್ಯಕ್ತಿಗಳ ಮೇಲಿನ ಅಭಿಮಾನದಿಂದ ಅಥವಾ ಹಳೆಯ ರೂಢಿಯಿಂದ ಕೈಕಟ್ಟಿಸಿಕೊಳ್ಳದೆ ತಮಗೆ ಸರಿತೋರಿದ ರೀತಿಯಲ್ಲಿ ಸದಸ್ಯ ವರ್ಗವನ್ನು ಆರಿಸಿಕೊಳ್ಳಬೇಕೆಂದು ಅಧ್ಯಕ್ಷರ ಮನವೊಲಿಸುವದಷ್ಟೇ ತಮ್ಮ ಭೂಮಿಕೆಯಾಗಿತ್ತೆಂದು ಅವರು ಹೇಳಿದರು. ಜನಾಭಿಪ್ರಾಯದ ಪ್ರತಿಬಿಂಬವಾಗಿರದ ಪಕ್ಷದಲ್ಲಿ ಸದ್ಯದ ಕಾರ್ಯಸಮಿತಿ ಒಂದು ದಿನವಾದರೂ ಆ ಸ್ಥಾನದಲ್ಲಿ ಉಳಿಯುತಿರಲಿಲ್ಲ. ಪ್ರಜಾತಂತ್ರ ಸಂಪೂರ್ಣ ಜಾಗ್ರತವಾಗಿದ್ದು ಕೆಲಸ ಸಾಗಿಸಬೇಕೆಂಬುದೊಂದೇ ಈ ವಿಷಯದಲ್ಲಿದ್ದ ನಿರ್ಬಂಧ. ಉದಾಹರಣೆಯಾಗಿ ಗಾಂಧೀಜಿಯವರು ಚರ್ಚಿಲ್ಲರ ಕಡೆ ಬೆರಳು ತೋರಿಸಿದರು. ಅವರು ಸಾಧಿಸಿದ ಪ್ರಚಂಡ ವಿಜಯಗಳನ್ನೂ ಮಹಾಕಾರ್ಯಗಳನ್ನೂ ಲೆಕ್ಕಿಸದೆ ಅವರು ಬ್ರಿಟಿಶ ಜನತೆಯ ಇಚ್ಛೆಯನ್ನು ಪ್ರತಿಬಿಂಬಿಸಲು ತಪ್ಪಿದ ತಕ್ಷಣ ಅವರನ್ನು ಕಿತ್ತು ಹಾಕಲಾಯಿತು. "ಇಷ್ಟು ಪ್ರಚಂಡ ಶಕ್ತಿಯೊಡನೆ ಕೂಲಿಕಾರ ಪಕ್ಷ ಅಧಿಕಾರಕ್ಕೆ ಬಂದುದು ರಾಜಕೀಯ ಪ್ರಜಾತಂತ್ರದ ಇತಿಹಾಸದಲ್ಲಿ ಅಪೂರ್ವ ಉದಾಹರಣೆ ಇದೊಂದು ಪಾಠ. ಇದನ್ನು ನಾವು ಮನನ ಮಾಡುವದು ಒಳಿತು," ಎಂದು ಗಾಂಧೀಜಿ ಸೂಚಿಸಿದನು.

ಗುಂಪಿನಲ್ಲಿ ಇನ್ನೊಬ್ಬನು, ಈಗಿನ ಸಂಪುಗಳ ಪಿಡುಗಿನ ಬೆನ್ನಹಿಂದೆ ಕೆಲ ಅಸತ್‌ಶಕ್ತಿಗಳ ಪ್ರಭಾವವಿದೆಯೆಂದು ಅಭಿಪ್ರಾಯಪಟ್ಟನು. ಇದರಲ್ಲಿ ಹೇತು ಆರ್ಥಿಕವಾಗಿರದೆ ರಾಜಕೀಯವಾಗಿದೆ. ಇದಕ್ಕೇನು ಪರಿಹಾರ ?

"ನೀವು ಸಂಪುಗಾರರೊಡನೆ ವಾದಿಸಬೇಕು" ಗಾಂಧೀಜಿಯ ಉತ್ತರ" "ಇದರಿಂದೊದಗುವ ಅಪಾಯವನ್ನು ತಿಳಿಯಹೇಳಬೇಕು. ಅವರಾಗಲಿ ಜನಸಾಮಾನ್ಯರಾಗಲಿ ಕಿವಿಗೊಡದಿದ್ದರೆ ನೀವು ರಾಜೀನಾಮೆ ಕೊಡಬೇಕು."

"ಆದರೆ ನಾವು ದೇಶಕ್ಕೆ ಒಂದು ಹೊಣೆ ಹೊತ್ತಿದ್ದೇವೆ. ಕಾಂಗ್ರೆಸ್ಸು ಹೇಗಾದರೂ ಅಧಿಕಾರ ಬಿಟ್ಟುಹೋಗಿ ದೇಶ ಅಸ್ತವ್ಯಸ್ತವಾಗಲೆಂದೇ ಹಾರೈಸುತ್ತಿರುವ ಆ ಅಸತ್ ಶಕ್ತಿಗಳ ಪ್ರಭಾವಕ್ಕೆ ನಾವು ದೇಶವನ್ನು ಸೂರೆ ಬಿಟ್ಟರೆ ನ್ಯಾಯವಾದೀತೆ? "ಆ ಗೆಳೆಯ ಇನ್ನೂ ಹಟ ಹೂಡಿದ.

"ಪ್ರಜಾತಂತ್ರ ಇದೊಂದೇ ರೀತಿಯಲ್ಲಿ ಕೆಲಸ ಮಾಡಬಲ್ಲದು," ಎಂದು ಗಾಂಧೀಜಿ ಮಾರುತ್ತರವಿತ್ತರು. "ಇದರಿಂದ ಜನತೆಗೆ ಶಿಕ್ಷಣ ಸಿಗುವದು ಜನತೆಯ ಬೆಂಬಲವಿಲ್ಲದಿದ್ದರೆ ಅಸತ್ ಪ್ರಭಾವಗಳ ಕೈಸಾಗಲಾರದು. ಕಾಂಗ್ರೆಸ್ಸು ಬಲಪಂತದಿಂದ ಆಳಿಕೆಯನ್ನು ಸಾಗಿಸುವದಿಲ್ಲವೆಂದು ಒಮ್ಮೆ ಮನವರಿಕೆಯಾಯಿತೆಂದರೆ ಮತ್ತೆ ಜನರು ವಿವೇಕವಿಲ್ಲದೆ ಹೊಣೆಗೆಟ್ಟು ನಡೆಯುವದನ್ನು ಬಿಟ್ಟುಬಿಡುವರು. ಆಗ ದುಷ್ಟ ಪ್ರಭಾವಗಳು ನಿಸ್ಸತ್ವವಾಗುವವು."

## ಆಹಾ, ತಾಸು ವಿಶ್ರಾಂತಿಯಿದ್ದರೆ!

"ಸೇವಾಗ್ರಾಮದಲ್ಲಿ ನನಗಿನ್ನೇನೇನಾಗುವದಿದೆಯೋ ನೋಡುವದುಳಿದಿದೆ," ಎಂದು ಉರುಳಿಯಲ್ಲಿ ನಾನು ಅವರನ್ನು ಕೊನೆಯ ಸಲ ಕಂಡಾಗ ಕೆಲಸದ ಅಸಹ್ಯ ಭಾರದಿಂದ ನರಳುತ್ತ ನುಡಿದಿದ್ದರು. "ಈ ಭಾರದಲ್ಲಿಯೆ ಅಂಥದೇನೂ ಇಲ್ಲ" ಅವರು ಮುಂದುವರಿದರು, "ಆದರೆ ಅನಾಸಕ್ತಿಯ ಅಭಾವದ್ದೇ ಈಗ ತಂಟೆ. ಪರಮಾತ್ಮನ ಇಚ್ಛೆಗೆ ಸರ್ವಯೋಗಕ್ಷೇಮವನ್ನು ಬಿಟ್ಟು ಬಿಡಲು ನಾನಿನ್ನೂ ಪೂರ್ಣ ಕಲಿತಿಲ್ಲ. ಆದರೆ ಪರಮಾತ್ಮನಲ್ಲಿ ಜೀವಂತ ವಿಶ್ವಾಸವಿದ್ದರೆ ಇದರಲ್ಲಿ ಹೆಚ್ಚು ಚಿಂತೆಗೇನೂ ಕಾರಣವಿಲ್ಲ" ಕಾಂಗ್ರೆಸ್ ಕಾರ್ಯಸಮಿತಿಯ ಸಭೆಯ ಫಲವಾಗಿ ಆಶ್ರಮದಲ್ಲಿ ಹಗಲಿರಿ ಜನಸಂದಣಿ ನುಗ್ಗುತಿದೆ. ಅವರು ಗಾಂಧೀಜಿಯ ಗುಡಿಸಲ ಸುತ್ತಲೂ ನೆರೆದು ಬಿಟ್ಟಿದ್ದಾರೆ. ಅವರ ಆತುರ ನೇತ್ರಗಳಿಂದ ಪಾರಾಗುವ ಗೋಸ್ಕರ ಗಾಂಧೀಜಿಗೆ ತಮ್ಮ ಬಾಗಿಲಿಗೆ ಪರದೆ ಹಾಕದೆ ಬೇರೆ ಉಪಾಯವೆ ಉಳಿಯಲಿಲ್ಲ. ತಾವು ಬಂದು ಸೇರಿದ ದಿನ ಸಂಜೆಯ ಪ್ರಾರ್ಥನಾ ಸಮಯದಲ್ಲಿಒಂದು ಬುದ್ಧಿಮಾತು ಹೇಳಲು ಈ ಜನಸಂದಣಿಯನ್ನು ಗಾಂಧೀಜಿ ಉಪಯೋಗಿಸಿಕೊಂಡರು. ಸಂಜೆಯ ಪ್ರಾರ್ಥನೆಯ ನಂತರ ಪ್ರತಿಯೊಬ್ಬ ಆಶ್ರಮವಾಸಿಯೂ ತನ್ನ ಸೂತ್ರಯಜ್ಞದ ವರದಿ ಮಾಡುವದು ರೂಢಿಗತವಾದ ಸಂಗತಿ. ಆಗ ಗಾಂಧೀಜಿಯವರು ಕೂಡಿದ ಜನಸಂದಣಿಗೆ ಹೇಳಿದ್ದು, "ನಿಮ್ಮಲ್ಲಿ ಎಷ್ಟು ಜನ ನೂಲುತ್ತೀರಿ? ಎಂದು ಕೇಳಿದರೆ ಬಹಳ ಜನ ಕೈಯೆತ್ತಲಿಕ್ಕಿಲ್ಲವೆಂದು ತೋರುತ್ತದೆ. ಆಶ್ರಮವಾಸಿಗಳು ಪ್ರಾರ್ಥನಾನಂತರ ದಿನದ ಸೂತ್ರಯಜ್ಞದ ವರದಿ ಒಪ್ಪಿಸಿದ್ದನ್ನು ನೀವು ಇದೇ ಈಗ ನೋಡಿದ್ದೀರಿ. ಈ ಆಶ್ರಮದಲ್ಲಿ ನೂಲುವದು ಪ್ರಾರ್ಥನೆಯ ಒಂದು ಅಂತರ್ಗತ ಅಂಗವಾಗಿರುವದೇ ಇದಕ್ಕೆ ಕಾರಣ. ನೂಲು ತೆಗೆಯುವದನ್ನು ಯಜ್ಞವೆಂದು ತಿಳಿಯುವದರಲ್ಲಿ ಪರಮಾತ್ಮನ ಕಲ್ಪನೆಯ ಸಂಬಂಧವಿದೆ. ಚರಕಾ ಮತ್ತು ಅದರ ಹಿಂದಿರುವ ತತ್ವಗಳು ದರಿದ್ರರ ಉದ್ಧಾರದ ಏಕಮಾತ್ರ ಉಪಾಯವೆಂಬ ನಮ್ಮೆಲ್ಲರ ವಿಶ್ವಾಸವೇ ಇದಕ್ಕೆ ಕಾರಣ" ಚರಕಾದಿಂದ ಒಬ್ಬನು ಜೀವಿಕೆಯನ್ನು ಗಳಿಸುವದು ಕಠಿನವೆಂದು ತಮಗೆ ಅರಿವಾಗಿದೆಯೆಂಬದನ್ನು ಗಾಂಧೀಜಿ ಒಪ್ಪಿಕೊಂಡರು. ಆದರೆ ಹಳ್ಳಿಗರು ನೂಲುವ ಮೂಲಕ ಸುಲಭವಾಗಿ ತಮ್ಮ ಬಟ್ಟೆಯನ್ನು ಹುಟ್ಟಿಸಿಕೊಳ್ಳಬಹುದು. ತಮ್ಮ ಬಟ್ಟೆಯ ವಿಷಯದಲ್ಲಿ ಸ್ವಾವಲಂಬನೆಯ ತತ್ವವನ್ನು ಮನವರಿತುಕೊಳ್ಳದಿರುವದರಿಂದಲೇ ಜನರು ಇತರ ವಿಷಯಗಳಲ್ಲಿಯೂ ಆ ತತ್ವದ ವಿಷಾದಕರ ಅಭಾವವನ್ನು ಪ್ರದರ್ಶಿಸುತ್ತಾರೆ ಇದರಿಂದ ಒಕ್ಕಲತನಕ್ಕೆ ಕೂಡ ಧಕ್ಕೆಯುಂಟಾಗಿದೆ. ಪರಿಣಾಮವಾಗಿ ಸಮೃದ್ಧಿಯ ನಡುವೆ ನಿರ್ಗತಿಕತೆಯನ್ನು ಜನರು ಅನುಭವಿಸಬೇಕಾಗಿದೆ. "ನಮ್ಮಲ್ಲಿ ಬೇಕಾದಷ್ಟು ಫಲುಪು ಭೂಮಿಯಿದೆ. ಅಲ್ಲಿ ನಾವು ಹಣ್ಣು ಹಂಪಲು, ಕಾಯಿಪಲ್ಲೆ ಮೊದಲಾದ ಆಹಾರ ವಸ್ತುಗಳನ್ನು ಬೆಳೆಸಬಹುದು. ಆದರೆ ನಮಗಿರುವ ಸಂದರ್ಭದ ಪೂರ್ಣ ಉಪಯೋಗವನ್ನು ನಾವು ತೆಗೆದುಕೊಳ್ಳುವದಿಲ್ಲ. ತಾಜಾ ಪರಿಪೂರ್ಣ ಆಹಾರವನ್ನು ಸೇವಿಸುವ ಬದಲು ನಾವು ಅದನ್ನು ಕೆಡಿಸಿ ತಿನ್ನುತ್ತೇವೆ. ಧಾನ್ಯಗಳನ್ನು ಬೆಳೆಸಿದರೂ ಅವುಗಳನ್ನು ಮಣ್ಣಿನಂತೆ ನಿಸ್ಸಾರ ಮಾಡಿ ತಿನ್ನುತ್ತೇವೆ. ದೇವರು ನಮಗೆ ಬೇಕಾಗುವದನ್ನೆಲ್ಲ ದಯಪಾಲಿಸಿದ್ದಾನೆ, ಬುದ್ಧಿಯನ್ನು ಕೊಟ್ಟಿದ್ದಾನೆ, ಎರಡು ಕೈಗಳನ್ನೂ ಕರುಣಿಸಿದ್ದಾನೆ. ನಾವು ನಮ್ಮ ಆಹಾರವನ್ನು ಹುಟ್ಟಿಸಿಕೊಳ್ಳಬಲ್ಲೆವು, ಹತ್ತಿಯನ್ನು ಬೆಳಸಿ ನಮ್ಮ ಬಟ್ಟೆಗಳನ್ನು ಮಾಡಿಕೊಳ್ಳಬಲ್ಲೆವು, ದನಕರುಗಳನ್ನು ಸಾಕಿ ಮಕ್ಕಳಿಗೆ ಹಾಲು ಉಣಿಸಬಲ್ಲೆವು. ಆದರೂ ನಾವು ಹಸಿವೆಯಿಂದ ನರಳುತ್ತಲೆ, ಅರೆಬತ್ತಲೆಯಾಗಿಯೆ, ಇರುತ್ತೇವೆ. ನಮ್ಮ ಮಕ್ಕಳು

೯ನೇ ಪುಟಕ್ಕೆ





# ವಾರದ ಪತ್ರ

(೮ನೇ ಪುಟದಿಂದ ಪುಟದಿಂದ ಬಂದುದು)

ಸರಿಯಾದ ಪಾಲನೆ ಪೋಷಣೆಯಿಲ್ಲದೆ ಹೋಗುತ್ತಾರೆ. ಇದಕ್ಕಿಂತ ಕೆಟ್ಟ ದುರಂತ ಬೇರೊಂದುಂಟೆ ?"

ಅವರು ಹಳ್ಳಿಗಳೊಡನೆ ನಗರಗಳನ್ನು ಹೋಲಿಸಿದರು. ಹಳ್ಳಿಗಳು ಜೀವನಕ್ಕೆ ಅವಶ್ಯವಿರುವದನ್ನೆಲ್ಲ ತಾವೇ ಹುಟ್ಟಿಸಿಕೊಳ್ಳಬಲ್ಲವಾದುದರಿಂದ ಅವು ಸ್ವಾವಲಂಬಿಯಾಗಿ ಬಾಳಬಲ್ಲವು. ನಗರಗಳ ಮಾತು ಹಾಗಲ್ಲ. ಅವು ತಮ್ಮ ಆಹಾರವನ್ನಾಗಲಿ ತಮ್ಮ ಅರಿವೆಅಂಚಡಿಗಳಿಗೆ ಬೇಕಾದ ಹತ್ತಿಯನ್ನಾಗಲಿ ಬೆಳೆಸಲಾರವು. ಹಳ್ಳಿಗಳ ಸಹಕಾರವಿಲ್ಲದೆ ದನಕರುಗಳನ್ನೂ ಸಾಕಲಾರವು. ಹೀಗಿದ್ದರೂ ಇಂದು ಸ್ವಾವಲಂಬಿಯಾದ ಒಂದೇ ಒಂದು ಹಳ್ಳಿಯಾದರೂ ಹಿಂದುಸ್ತಾನದಲ್ಲಿರುವದು ತಮಗೆ ಗೊತ್ತಿಲ್ಲವೆಂದು ಗಾಂಧೀಜಿ ನುಡಿದರು. ಸೇವಾಗ್ರಾಮ ಅಂಥ ಹಳ್ಳಿಯಾಗಬಹುದಾಗಿತ್ತು. ಆದರೆ ಅದಿನ್ನೂ ಆ ಸ್ಥಿತಿಗೆ ಬಹಳ ದೂರದಲ್ಲಿದೆ. ನಮ್ಮ ಹಳ್ಳಿಗರು ಮೈಗಳ್ಳರು, ಸೋಮಾರಿಗಳು, ಜೂಜಾಟ ಮೊದಲಾದುದರಲ್ಲಿ ಹೊತ್ತು ಹಾಳುಮಾಡುವವರು. ಚರಕವನ್ನು ಬಿಟ್ಟು ಪೂರ್ತಿಯಾಗಿ ಭೂಮಿಯ ಮೇಲೆಯೆ ಶ್ರಮವನ್ನು ಕೇಂದ್ರೀಕರಿಸಲು ಯತ್ನಿಸಿದರೆ ಅದು ಸಫಲಕಾರ್ಯವಾಗುವದಿಲ್ಲವೆಂದು ಅವರು ನೆರೆದವರನ್ನು ಎಚ್ಚರಿಸಿದರು. "ಬದಲಿಗೆ ರಾಟೆಯ ಪುನರುಜ್ಜೀವನದಿಂದ ನಿಮ್ಮಲ್ಲಿರುವ ನಿರುತ್ಸಾಹ, ಜಡತೆಗಳು ನಿಮ್ಮನ್ನು ಬಿಟ್ಟುಹೋಗುವದರಿಂದ ನಿಮ್ಮ ಒಕ್ಕಲತನವೂ ಪುನರುಜ್ಜೀವನಗೊಳ್ಳುವದು"

ದಿನವಿಡಿ ತಮ್ಮ ಗುಡಿಸಲಿಗೆ ಅಕ್ಷರಶಃ ಮುತ್ತಿಗೆಯನ್ನೆ ಹಾಕಿಬಿಟ್ಟಿದ್ದ ಜನಜಂಗುಳಿಯ ಅವಿವೇಕದ ಪೂಜಾ ಬುದ್ಧಿಯನ್ನು ಟೀಕಿಸುತ್ತ ಗಾಂಧೀಜಿಯವರು ಇದರಿಂದ ತಮಗೆ ಹೇಗೆ ತಲೆ ಚಿಟ್ಟೇರಿ ಹೋಗಿದೆಯೆಂದು ವಿವರಿಸಿದರು. "ಇದೆಲ್ಲ ನನಗೆ ಸಾಕೋಸಾಕಾಗಿ ಬಿಟ್ಟಿದೆ. ಇದರಿಂದ ನನಗೂ ಸುಖವಿಲ್ಲ ನಿಮಗೂ ಇಲ್ಲ. ನಿಜವಾದ ಆದರ ಆ ಆದರಕ್ಕೆ ಗುರಿಯಾದವನ ಇಚ್ಛೆಯನ್ನು ಪಾಲಿಸುವದರಲ್ಲಿದೆ ಹೊರತು ಅವನನ್ನು ಬರೆ ಬೆಕ್ಕಸಬೆರಗಾದಂತೆ ನೋಡುತ್ತ ನಿಂತು ಅವನ ಸಮಯವನ್ನೂ ಸ್ವಂತದ ಸಮಯವನ್ನೂ ಹಾಳುಮಾಡುವದರಲ್ಲಿಲ್ಲ."

## ಮಹತ್ವದ ಪ್ರಶ್ನೆ

ಮೊನ್ನೆ ವರ್ಧಾದ ಸಕ್ಸೇರಿಯಾ ವಾಣಿಜ್ಯ ಕಾಲೇಜಿನ ಪ್ರಿನ್ಸಿಪಾಲರಾದ ಶ್ರೀ ಶ್ರೀಮನ್ನಾರಾಯಣ ಅಗ್ರವಾಲರೂ ಅದರ ವ್ಯವಸ್ಥಾಪಕ ಮಂಡಲವೂ ತಮ್ಮ ಕಾಲೇಜಿನಲ್ಲಿ ಮರಾಠಿಯೆ ಶಿಕ್ಷಣದ ಮಾಧ್ಯಮವಾಗಬೇಕೆಂದು ನಿರ್ಧರಿಸಿ ಶೈಕ್ಷಣಿಕ ಸುಧಾರಣೆಯಲ್ಲಿ ಬಹಳ ದೊಡ್ಡ ಮುಂದಡಿಯನ್ನು ಇಟ್ಟಿದ್ದಾರೆ. ಈ ಬದಲಾವಣೆಯನ್ನು ಔಪಚಾರಿಕವಾಗಿ ಪ್ರಾರಂಭಿಸುವ ಸಲುವಾಗಿ ತಾ. ೯ಕ್ಕೆ ಒಂದು ಉತ್ಸವವನ್ನು ಏರ್ಪಡಿಸಲಾಗಿತ್ತು. ಅದಕ್ಕೆ ಅನೇಕ ಪ್ರತಿಷ್ಠಿತ ಆಮಂತ್ರಿತರು, ಅವರಲ್ಲಿ ಮಧ್ಯಪ್ರಾಂತದ ಮುಖ್ಯ ಮಂತ್ರಿಗಳು ಮತ್ತು ಅವರ ಅನೇಕ ಸಹೋದ್ಯೋಗಿಗಳೂ ನಾಗಪುರ ವಿಶ್ವವಿದ್ಯಾಲಯದ ವಾಯಿಸ ಚಾನ್ಸಲರೂ ಬಂದಿದ್ದರು. ಈ ಸಂದರ್ಭಕ್ಕೆ ಹೊರಗಿನ ಹತ್ತು ಸಾವಿರದಷ್ಟು ಜನರು ವರ್ಧಾದಲ್ಲಿ ಬಂದು ನೆರೆದು ನಗರದ ಸೀದಾ ವ್ಯವಸ್ಥೆಯನ್ನೆ ಹಳಿತಪ್ಪಿ ಹೋಗುವಂತೆ ಮಾಡಿದ್ದು ವಿಶೇಷವಾಗಿದೆ. ಮೊದಲಿನ ವ್ಯವಸ್ಥೆಯಂತೆ ಉತ್ಸವವನ್ನು ಕಾಲೇಜಿನ ಸಭಾಭವನದಲ್ಲಿ ಸಂಜೆಗೆ ಜರಗಿಸಬೇಕಾಗಿತ್ತು ಮತ್ತು ಗಾಂಧೀಜಿ ಅಂದಿನ ಸಭೆಯಲ್ಲಿ ಭಾಷಣ ಮಾಡಬೇಕಾಗಿತ್ತು. ಆದರೆ ಜನಸಮೂಹ ಶಿಸ್ತುಗೇಡಿಯಾಗಿ ಹಿಡಿತಕ್ಕೆ ಬಾರದುದರಿಂದ ಆ ಪ್ರಯತ್ನವನ್ನು ತ್ಯಜಿಸಿ ಗಾಂಧೀಜಿ ತಡವಾಗಿ ೬ ಗಂಟೆಯ ಸಮಯಕ್ಕೆ ಬಯಲಲ್ಲಿ ಭಾಷಣ ಮಾಡಬೇಕಾಗಿಬಂತು. ಉತ್ಸವವನ್ನೂ ಸಂಜೆಯ ಪ್ರಾರ್ಥನೆಯನ್ನೂ ಒಂದುಗೂಡಿಸುವ ಉಪಾಯವಾಗಿತ್ತು ಅದು.

ಶ್ರೀ ರವಿಶಂಕರ ಶುಕ್ಲರು ಈ ಸುಧಾರಣೆಯ ತತ್ವವನ್ನು ವಿವರಿಸುತ್ತ ೧೯೪೦ರಲ್ಲಿ ಕಾಂಗ್ರೆಸ್ ಮಂತ್ರಿಮಂಡಲ ತಾನು ರಾಜೀನಾಮೆ ಕೊಡುವ ಮುಂಚಿತವಾಗಿ ವಿಶ್ವವಿದ್ಯಾಲಯ ಶಿಕ್ಷಣವನ್ನು ಮಾತೃಭಾಷೆಯಲ್ಲಿ ಕೊಡುವ ಪ್ರಶ್ನೆಯನ್ನು ವಿಚಾರಿಸಲು ಒಂದು ಸಮಿತಿ ನೇಮಿಸಿತ್ತೆಂಬ ಅಂಶವನ್ನು ಹೊರಗೆಡಹಿದರು. ಆ ಸಮಿತಿಯ ವರದಿ ಅನುಕೂಲವಾಗಿತ್ತು. ಆದರೆ ಅಷ್ಟರಲ್ಲಿ ಕಾಂಗ್ರೆಸ್ ಮಂತ್ರಿಮಂಡಲ ಅಧಿಕಾರತ್ಯಾಗ ಮಾಡಿದ್ದರಿಂದ ೯೩ ನೆ ಕಲಮಿನ ಸರಕಾರ ಆ ವರದಿಯನ್ನು ಮೂಲೆಪಾಲು ಮಾಡಿತ್ತು. ಕಾಂಗ್ರೆಸ್ ಮಂತ್ರಿಮಂಡಲ ತಿರುಗಿ ಅಧಿಕಾರಕ್ಕೆ ಬಂದ ಮೇಲೆಯೆ ಅದನ್ನು ಅಗೆದು ತೆಗೆಯಲಾದುದು. ನಾಗಪುರ ವಿಶ್ವವಿದ್ಯಾಲಯದ ವಾಯಿಸ ಚಾನ್ಸಲರರು ತಮ್ಮ ಚುಟುಕು ನುಡಿಯಲ್ಲಿ ೧೯೪೯ ರಷ್ಟು ಹೊತ್ತಿಗೆ ಮಧ್ಯಪ್ರಾಂತದ ಇಡಿ ವಿಶ್ವವಿದ್ಯಾಲಯ ಶಿಕ್ಷಣವನ್ನು ಪೂರ್ತಿಯಾಗಿ ಮಾತೃಭಾಷೆಯಲ್ಲಿ ಕೊಡುವದು ಸಾಧ್ಯವಾಗಬಹುದೆಂದು ಸಂಕೇತವಿತ್ತರು.

## ಸ್ವಾತಂತ್ರ್ಯದ ತಳಹದಿ

ಕಿಡಿಕಿಗಳನ್ನೊಡೆದು ನುಗ್ಗಿ ಬಂದಿದ್ದ ಮತ್ತು ಸಾಧ್ಯವಿದ್ದಿದ್ದರೆ ಚಪ್ಪರವನ್ನೂ ಒಡೆದು ಒಳಗೆ ಬರಲು ಸಿದ್ಧವಾಗಿದ್ದ ಅಳತೆಗೆಟ್ಟ ಜನಸಂದಣಿಯನ್ನು ಗಾಂಧೀಜಿ ತಮ್ಮ ಸಂಜೆಯ ಭಾಷಣದಲ್ಲಿ ಚನ್ನಾಗಿ ಜರೆದು, ಬರಲಿರುವ ಸ್ವಾತಂತ್ರ್ಯಕ್ಕೆ ಇದು ಶುಭಸೂಚಕವಲ್ಲವೆಂದು ನುಡಿದರು "ನಿಮ್ಮ ನಗರದಲ್ಲಿ ಸಭೆ ಸೇರಿರುವ ಕಾಂಗ್ರೆಸ್ ಕಾರ್ಯಸಮಿತಿ ಹಿಂದುಸ್ತಾನದ ಜನತೆಗೆ ಹೇಗೆ ಅತ್ಯಲ್ಪ ಅವಧಿಯಲ್ಲಿ ಸ್ವಾತಂತ್ರ್ಯವನ್ನು ಗಳಿಸಿಕೊಡಬಹುದೆಂಬ ಚಿಂತನೆಯಲ್ಲಿ ಮಗ್ನವಾಗಿದೆ ಅದು ಒದ್ದಾಡುತಿರುವದು ಬರಿ ಒಡೆತನ ಬದಲಿಸುವಗೋಸುಗವಲ್ಲ. ಜನತೆಗೆ ಸ್ವಾತಂತ್ರ್ಯ ಸುಖವನ್ನು ಅನುಭವಿಸಬೇಕೆಂಬ ಆಶೆಯಿದ್ದರೆ ಅದು ಮೊದಲು ಸ್ವಯಂಪ್ರೇರಿತವಾಗಿ ಶಿಸ್ತು ಪಾಲಿಸುವ ರಹಸ್ಯವನ್ನು ಕಲಿಯಬೇಕು ಇಲ್ಲದಿದ್ದರೆ ಅಧಿಕಾರ ಪಡೆದವರು ಅವರ ಮೇಲೆ ಶಿಸ್ತನ್ನು ಹೊರಿಸಬೇಕಾಗಿ ಬಂದೀತು. ಅದು ಸ್ವಾತಂತ್ರ್ಯವೆನಿಸುವ ಬದಲು ಅದರ ವಿಪರ್ಯಾಸವೆನಿಸುವದು. ಯಾವುದೇ ಜನತೆಗೆ ಅದರ ಯೋಗ್ಯತೆಗೆ ತಕ್ಕ ಸರಕಾರವೇ ಸಿಗುತ್ತದೆ. ಜನರು ಪುಂಡಾಟಿಕೆಯಲ್ಲಿ ಮಗ್ನರಾದರೆ ಸರಕಾರವೂ ಅದರ ಅಧಿಕಾರಿಗಳೂ ಕೂಡ ಶಾಸನ ಸುವ್ಯವಸ್ಥೆಗಳ ಹೆಸರಲ್ಲಿ ಪುಂಡಾಟಿಕೆಯನ್ನೇ ನಡೆಸುವರು. ಪರಿಣಾಮವಾಗಿ ದೊರೆಯಬಹುದಾದ್ದು ಸ್ವಾತಂತ್ರ್ಯವಲ್ಲ, ಪರಸ್ಪರರನ್ನು ಬಿಗಿ ಹಿಡಿಯಲು ಹೆಣಗುವ ಎರಡು ಅರಾಜಕತೆಗಳ ಸರಿತೂಕ. ಸ್ವಯಂಪ್ರೇರಿತವಾದ ಶಿಸ್ತು ಸಾಮೂಹಿಕ ಸ್ವಾತಂತ್ರ್ಯದ ಪ್ರಥಮ ಅವಶ್ಯಕತೆ. ಜನರು ಯೋಗ್ಯ ವರ್ತನೆಯವರಾಗಿದ್ದರೆ ಸರಕಾರಿ ಅಧಿಕಾರಿಗಳು ಅವರ ನಿಜ ಸೇವಕರಾಗುವರು. ಇಲ್ಲದಿದ್ದರೆ ಇವರು ಅವರ ಮೇಲೆ ಕುದುರೆ ಸವಾರಿ ಮಾಡುವರು. ಮತ್ತು ಒಂದು ಬಗೆಯಾಗಿ ಇದು ನ್ಯಾಯವೆಂದೂ ತೋರಬಹುದು. ಬೋಅರ ಯುದ್ಧದ ಕಾಲದಲ್ಲಿ ಸಾವಿರಗಟ್ಲೆ ಸೈನಿಕರು ಉಷ್ಣವಲಯದ ಕಟ್ಟಡವಿಯಲ್ಲಿ, ನಟ್ಟಿರುಳ ಕಗ್ಗತ್ತಲೆಯಲ್ಲಿ ನಿಶ್ಶಬ್ದವಾಗಿ ಕೂಚು ಮಾಡಿದ್ದನ್ನು ನಾನು ನೋಡಿದ್ದೇನೆ. ಸಿಗರೇಟು ಹಚ್ಚಲು ಕೂಡ ಒಂದು ಬೆಂಕಿ ಕಡ್ಡಿಯನ್ನು ಕೊರೆಯುವಂತಿದ್ದಿಲ್ಲ, ಶತ್ರುವಿಗೆ ಸೈನ್ಯ ಚಲನವಲನದ ಸುಳುಹು ಹತ್ತೀತೆಂಬ ಭಯದಿಂದ. ಇಡಿ ಸೈನ್ಯದಳವೆ ಪರಿಪೂರ್ಣ ನಿಶ್ಶಬ್ದತೆಯಿಂದ ಒಬ್ಬನೇ ಮನುಷ್ಯನೋ ಎಂಬಂತೆ ಚಲಿಸುತಿತ್ತು. ಸ್ವಾತಂತ್ರ್ಯದ ಪಥದಲ್ಲಿ ಕೂಚು ಮಾಡುತಿರುವ ರಾಷ್ಟ್ರಕ್ಕೆ ಶಿಸ್ತಿನ ಅವಶ್ಯಕತೆ ಇದಕ್ಕಿಂತ ಎಷ್ಟೋ ಹೆಚ್ಚು, ಅದಿಲ್ಲದೆ ರಾಮರಾಜ್ಯ, ಎಂದರೆ ಪೃಥ್ವಿಯಲ್ಲಿ ದೇವರ ರಾಜ್ಯ ಸ್ಥಾಪಿಸುವದು ಬರಿ ಕನಸು."

ಸಕ್ಸೇರಿಯಾ ಕಾಲೇಜಿನ ಪ್ರಿನ್ಸಿಪಾಲರೂ ವ್ಯವಸ್ಥಾಪಕರೂ ತಮ್ಮ ಕಾಲೇಜಿನಲ್ಲಿ ಮಾತೃಭಾಷೆಯೆ ಶಿಕ್ಷಣ ಮಾಧ್ಯಮವಾಗಬೇಕೆಂದು ನಿರ್ಧರಿಸುವಲ್ಲಿ ಒಂದು ದೊಡ್ಡ ಮುಂದಡಿಯಿಟ್ಟಿದ್ದಾರೆಂದು ಗಾಂಧೀಜಿ ಮುಂದುವರಿದರು. ಆದರೆ ಅವರು ಸೋಮಾರಿಗಳಾಗಿದ್ದರೆ ಅಥವಾ ಜನತೆಯ ಸಹಕಾರ ಲಭಿಸದಿದ್ದರೆ ಈ ಸುಧಾರಣೆ ಎಂದಿಗೂ ಕೂಸಾಗಿಯೆ ಉಳಿದೀತು.

ರಾಷ್ಟ್ರಭಾಷೆಯ ಪ್ರಚಾರ ಪ್ರಾಂತಿಕ ಭಾಷೆಗಳಿಗೆ ಹಿತಾವಹವಾಗಲಿಕ್ಕಿಲ್ಲೆಂಬ ಭಯ ವ್ಯಕ್ತಗೊಳಿಸಲ್ಪಟ್ಟಿದೆ. ಆ ಭಯ ಅಜ್ಞಾನದಿಂದ ಹುಟ್ಟಿದ್ದು. ಸಕ್ಸೇರಿಯಾ ಕಾಲೇಜಿನ ಪ್ರಸ್ತುತ ಕ್ರಮದಿಂದ ಖಂಡಿತ ಈ ಸಂದೇಹದ ನಿರಸನವಾಗಬೇಕು. ರಾಷ್ಟ್ರಭಾಷೆಯ ಸೌಧವನ್ನು ಕಟ್ಟಲು ಪ್ರಾಂತಭಾಷೆಗಳೇ ಬಲಿಷ್ಠವಾದ ತಳಪಾಯವಾಗಿವೆ. ಅವೆರಡು ಒಂದಕ್ಕೊಂದು ಪೂರಕ ಹೊರತು ಮಾರಕವಲ್ಲ ಎಂದು ಗಾಂಧೀಜಿ ಹೇಳಿದರು.

ಮಾತೃಭಾಷೆಯ ಮಾಧ್ಯಮದ ಮೂಲಕ ತಾಂತ್ರಿಕ ಶಿಕ್ಷಣ ಕೊಡುವದು ಸಾಧ್ಯವಾಗಬೇಕಾದರೆ ಬಹಳ ಸಂಶೋಧನೆ, ಸನ್ನಾಹಗಳು ಅವಶ್ಯವಾಗುವವೆಂಬ ಸೂಚನೆಯನ್ನು ಗಾಂಧೀಜಿ ಅಲ್ಲಗಳೆದರು. ಈ ಬಗೆಯಾಗಿ ವಾದಿಸುವವರಿಗೆ ನಮ್ಮ ಹಳ್ಳಿಯ ಮಾತುಗಳಲ್ಲಿ ಅಡಗಿರುವ ದೇಸಿ ನುಡಿಗಳ ಸಮೃದ್ಧ ಸಂಪತ್ತಿಯ ಅರಿವಿಲ್ಲ. ಶಬ್ದಗಳನ್ನು ಹುಡುಕುತ್ತ ಪರ್ಶಿಯನ್ ಭಾಷೆಗೆ ಶರಣು ಹೋಗುವ ಅವಶ್ಯಕತೆಯಿಲ್ಲವೆಂದು ಗಾಂಧಿಜಿ ಅಭಿಪ್ರಾಯಪಟ್ಟರು. ಚಂಪಾರಣ್ಯದಲ್ಲಿ ತಾವಿದ್ದಾಗ ಹಳ್ಳಿಯ ಜನರು ಯಾವುದೇ ಪರಭಾಷೆಯ ಶಬ್ದ ವಾಗ್ಧೋರಣೆಗಳ ನೆರವು ಇಲ್ಲದೆಯೆ ತಮ್ಮ ಭಾವನೆಗಳನ್ನು ಸರಿಯಾಗಿ ವ್ಯಕ್ತಗೊಳಿಸಲು ಸಮರ್ಥರಾಗಿದ್ದುದನ್ನು ಕಂಡುಕೊಂಡುದಾಗಿ ಅವರು ತಿಳಿಸಿದರು. ಅವರ ಕಲ್ಪಕತೆಗೆ ಉದಾಹರಣೆಯಾಗಿ ಅವರು ಮೋಟಾರ ಕಾರಿಗೆ "ಹವಾ ಗಾಡೀ" ಯೆಂಬ ಹೆಸರನ್ನು ಇಟ್ಟಿದ್ದುದನ್ನು ಗಾಂಧೀಜಿ ಉಲ್ಲೇಖಿಸಿದರು. ವಿಶ್ವವಿದ್ಯಾಲಯ ವಿದ್ವಾಂಸರಾದವರೂ ಮೋಟಾರ ಕಾರಿಗೆ ಇದಕ್ಕಿಂತ ಒಪ್ಪುವ ಶಬ್ದವನ್ನು ಕಲ್ಪಿಸಿ ತೋರಿಸಲೆಂದು ಅವರು ಅಹ್ವಾನವಿತ್ತರು.

ಈ ಸುಧಾರಣೆಯಿಂದ ಕಾಲೇಜಿನ ವಿದ್ಯಾರ್ಥಿಗಳಿಗೆ ಕನಿಷ್ಠ ಮೂರು ವರ್ಷವಾದರೂ ಉಳಿಯುವವೆಂದು ಭಾಷಣಕಾರರೊಬ್ಬರು ಹೇಳಿದ್ದರು. ಆದರೆ ಇದರಿಂದ ಉಳಿಯುವ ಸಮಯವೂ ಶ್ರಮವೂ ಅದಕ್ಕಿಂತಲೂ ಹೆಚ್ಚಾಗಬಹುದೆಂಬುದು ಗಾಂಧೀಜಿಯ ಅಭಿಪ್ರಾಯವಾಗಿತ್ತು. "ಇದಲ್ಲದೆ ತಾವು ಮಾತೃಭಾಷೆಯಲ್ಲಿ ಅಭ್ಯಸಿಸಿದುದನ್ನು ವಿದ್ಯಾರ್ಥಿಗಳು ಸುಲಭವಾಗಿ ಮನೆಯಲ್ಲಿ ತಮ್ಮ ತಾಯಿ ತಂಗಿಯರಿಗೆ ತಿಳಿಹೇಳಬಲ್ಲರು. ಆ ಮೂಲಕ ಅವರನ್ನು ತಮ್ಮ ಮಟ್ಟಕ್ಕೆ ತರುವರು. ಹೆಂಗಸು ಮನುಷ್ಯನ ಅರ್ಧಾಂಗಿಯೆಂದು ಬಣ್ಣಿಸಲ್ಪಟ್ಟಿದ್ದಾಳೆ. ಇಂದು ಹಿಂದುಸ್ತಾನದಲ್ಲಿ ಗಂಡಸರ ವಿಚಾರಜಗತ್ತಿಗೂ ಹೆಂಗಸರದಕ್ಕೂ ನಡುವೆ ಒಂದು ದೊಡ್ಡ ಅಂತರಾಳವೆ ಇದೆ. ಇದು ವಿದೇಶಿ ಭಾಷೆಯ ಶಿಕ್ಷಣದ ಉಪಕಾರ. ನಮ್ಮ ಹೆಣ್ಣುಮಕ್ಕಳು ಹಿಂದುಳಿದು ಹೋಗಿದ್ದಾರೆ. ಅಜ್ಞಾನದಲ್ಲಿ ಮುಳುಗಿದ್ದಾರೆ. ಹೀಗೆ ಹಿಂದುಸ್ತಾನ ಬಲಭಾಗಕ್ಕೆ ಪಕ್ಷವಾತ ಹಿಡಿದ ರೋಗಿಯಂತಾಗಿದೆ. ಈ ಪೀಡೆಯನ್ನು ತೊಲಗಿಸಿದಲ್ಲದೆ ಹಿಂದುಸ್ತಾನ ಪೂರ್ಣ ಶಕ್ತಿಯನ್ನು ಸಂಪಾದಿಸಲಾರದು.

ಸೇವಾಗ್ರಾಮ ೧೧-೮-೪೬. — ಪ್ಯಾರೇಲಾಲ

---

## ಗೋವಾ

ಗೋವೆಯ ಜನರ ಬಾಯಿಗೆ ಬೀಗ ಹಾಕಿ 'ಮಾನವೀಕರಣ'ದ ತಮ್ಮ ಚಟುವಟಿಕೆಗಳನ್ನು ಗೋವೆಯ ಅಧಿಕಾರಿಗಳು ಬಹಳ ಆನಂದದಿಂದ ಮುಂದುವರಿಸಿರುವರು ನಾಗರಿಕ ಸ್ವಾತಂತ್ರ್ಯದ ತಮ್ಮ ಪ್ರಾಥಮಿಕ ಹಕ್ಕನ್ನು ಒತ್ತಿ ಹೇಳಿದ ಅಪರಾಧಕ್ಕಾಗಿ ಶ್ರೀ ಬ್ರಾಗಾಂಝಾ ಕುನ್ಹಾರವರಿಗೆ ಎಂಟು ವರ್ಷಗಳ ಶಿಕ್ಷೆಯನ್ನು ವಿಧಿಸಿ ಅಫ್ರಿಕೆಯಲ್ಲಿರುವ ದೂರದ ಪೋರ್ತುಗೀಜ ಒಕ್ಕಲ ನಾಡಿಗೆ ಗಡಿಪಾರು ಮಾಡಿದ ದಂಡಿನ ನ್ಯಾಯಾಲಯದ ಶಿಕ್ಷೆಯೇ ಆ ಚಟುವಟಿಕೆಗಳ ಬಿಸಿ ಉದಾಹರಣೆ. ಬ್ರಿಟಿಶ ಹಿಂದುಸ್ತಾನದ ಜನರ ಸುಖ ದುಃಖಗಳಲ್ಲಿ ಬೆರೆತು ಹೋಗಲು ಪ್ರೋತ್ಸಾಹಿಸಿದ ಫ್ರೆಂಚ ಗವ್ಹರ್ನರರ ಕೃತಿಗೆ ವಿರುದ್ಧವಾಗಿರುವ ಗೋವೆಯ ಅಧಿಕಾರಿಗಳ ಧೋರಣವನ್ನು ನಿಷೇಧಿಸುವ ಗೊತ್ತುವಳಿಯನ್ನು ಕಾಂಗ್ರೆಸ ಕಾರ್ಯ ಸಮಿತಿಯು ಅಂಗೀಕರಿಸಿದ್ದುದು ವಿಹಿತವಾಗಿದೆ.

ಸೇವಾಗ್ರಾಮ ೧೨—೮—೪೬ — ಮೋ. ಕ. ಗಾಂಧಿ

## ಗೋವಾ ಗವರ್ನರರಿಗೆ ಉತ್ತರ

ಪ್ರಿಯ ಮಿತ್ರರೇ,

ಗೋವೆಯ ಪರಿಸ್ಥಿತಿ ಬಗ್ಗೆ ನಾನು ಹರಿಜನ ಪತ್ರದಲ್ಲಿ ಬರೆದ ಲೇಖಕ್ಕೆ ನೀವು ಉತ್ತರ ಕೊಟ್ಟದ್ದು ಒಳ್ಳೆಯದೇ ಆಯಿತು. ಪೋರ್ತ್ಯಾಂದಿಶ್ ಡೇಲಾ ಗೋವಾ ಮತ್ತು ಇನಾಂಬ್ಹಾನೆ ಎಂಬ ಪೋರ್ತುಗೀಜ ಆಡಳಿತಗೊಳಪಟ್ಟ ನಗರಗಳನ್ನು ನಾನು ಸಂದರ್ಶಿಸಿದ್ದು ನಿಮಗೆ ಗೊತ್ತಿರಬಹುದು. ಅಲ್ಲಿಯ ಸರಕಾರ ಉದಾರ ಧೋರಣೆಯನ್ನಿಟ್ಟುಕೊಂಡದ್ದು ನನಗೆ ಕಂಡುಬರಲಿಲ್ಲ. ಅಲ್ಲದೆ ಹಿಂದೀಯರು ಮತ್ತು ಪೋರ್ತುಗೀಜರು ಹಾಗೂ ಅಫ್ರಿಕನರು ಮತ್ತು ತಮ್ಮವರ ನಡುವೆ ಇದ್ದ ಭೇದವು ನನ್ನಲ್ಲಿ ಪರಮಾಶ್ಚರ್ಯವನ್ನುಂಟುಮಾಡಿತು. ಗೋವೆಯಲ್ಲಿ ಪೋರ್ತಗಾಲ ಸರಕಾರದ ಆಡಳಿತೆಯೂ ಅದೇ ಮಾದರಿಯದು. ನನಗೆ ಗೊತ್ತಿದ್ದ ಮಟ್ಟಿಗೆ ಗೋವೆಯ ಆಡಳಿತೆಯಲ್ಲಿ ಹೇಳಿಕೊಳ್ಳುವಂತಹದೇನೂ ಇಲ್ಲ. ಗೋಮಾಂತಕರು ಬಾಯಿ ಹೊಲಿದುಕೊಂಡಿರುವದು ಅಲ್ಲಿಯ ಭೀಕರ ದಬ್ಬಾಳಿಕೆಯ ಪರಿಣಾಮವಲ್ಲದೆ ಪೋರ್ತಗೀಜ ಸರಕಾರದ ಔದಾರ್ಯದ ಅಥವಾ ನಿರಪರಾಧಿತ್ವದ ಪ್ರತಿಫಲವಲ್ಲ. ಗೋವೆಯಲ್ಲಿ ಪೂರ್ಣ ಸ್ವಾತಂತ್ರ್ಯವಿದೆ. ಚಳವಳಿಯನ್ನು ಕೆಲವು ಅಸಂತುಷ್ಟರು ಮಾತ್ರ ಕೈಕೊಂಡಿದ್ದಾರೆಂಬ ನಿಮ್ಮ ಅಭಿಪ್ರಾಯವನ್ನು ನಾನು ಒಪ್ಪಲಾರೆ.

ನನಗೆ ವೈಯಕ್ತಿಕವಾಗಿ ತಿಳಿದು ಬರುವ ಮತ್ತು ಇಲ್ಲಿಯ ಪತ್ರಿಕೆಗಳಲ್ಲಿ ಪ್ರಸಿದ್ಧವಾದ ಗೋವೆಯ ಪರಿಸ್ಥಿತಿ ನಿಮ್ಮ ವರ್ಣನೆಗಿಂತ ತೀರ ಭಿನ್ನವಾಗಿರುವದು. ಡಾ. ಬ್ರಿಗಾಂಝಾ ಅವರಿಗೆ ಎಂಟು ವರುಷ ಶಿಕ್ಷೆ ವಿಧಿಸಿ ಅಫ್ರಿಕೆಗೆ ಗಡಿಪಾರುಮಾಡುವ ನಿಮ್ಮ ಯೋಜನೆಯು ಗೋವೆಯಲ್ಲಿ ನಾಗರಿಕ ಹಕ್ಕು ಬಹಳ ಅಪರೂಪವೆಂಬುದನ್ನು ಸಿದ್ಧಗೊಳಿಸುತ್ತದೆ. ಕಾಯಿದೆ ಪಾಲಕನಾದ ಡಾ. ಬ್ರಿಂಗಾಂಝಾನು ಗಡಿಪಾರು ಮಾಡುವಷ್ಟು ಗಂಡಾಂತರದ ಪ್ರಾಣಿಯೆಂದು ಭಾವಿಸುವದೋ

ಡಾ. ಲೋಹಿಯಾರವರ ರಾಜಕೀಯ ಅಭಿಪ್ರಾಯವನ್ನು ನಾನು ಒಪ್ಪಲಿಕ್ಕಿಲ್ಲ. ಆದರೆ ಅವರು ಗೋವೆಗೆ ತೆರಳಿ ಅಲ್ಲಿಯ ಕೊಳಚಿಯನ್ನು ಹೋಲಿಕೃತಿ ತೋರಿಸಿದ್ದರಿಂದ ಅವರು ನನ್ನ ಆದರಕ್ಕೆ ಪಾತ್ರರಾಗಿರುವರು. ವಿಶಾಲ ಭಾರತಕ್ಕೆ ಸ್ವಾತಂತ್ರ್ಯ ಸಿಗುವವರೆಗೆ ಗೋಮಾಂತಕರು ತಮ್ಮ ಸ್ವಾತಂತ್ರ್ಯಸಂಪಾದನೆಯ ಆತುರವನ್ನು ತಡೆದುಕೊಳ್ಳಬಹುದು. ಆದರೆ ನಾಗರಿಕರ ಹಕ್ಕುಗಳಿಲ್ಲದೆ ಯಾರೂ ಬದುಕಲಾರರು. ಅದಿಲ್ಲದಿದ್ದರೆ ಮಾನವನ ಸ್ವಾಭಿಮಾನಕ್ಕೆ ಕುಂದು ಬರಬಹುದು. ಗೋಮಾಂತಕರಿಗೆ ಅವಶ್ಯವಾದ ಸ್ವಾತಂತ್ರ್ಯ ಜ್ಯೋತಿಯನ್ನು ಡಾ. ಲೋಹಿಯಾರವರು ಹೊತ್ತಿಸಿರುವರು. ಅದು ಶಾಂತವಾಗುವಂತೆ ಅವಕಾಶ ಕಲ್ಪಿಸುವದು ಆತ್ಮಘಾತಕವೇ ಸರಿ. ಅದುದರಿಂದ ನೀವು ಹಾಗು ಗೋಮಾಂತಕರು ಡಾ. ಲೋಹಿಯಾರವರಿಗೆ ಋಣಿಯಾಗಬೇಕಾಗಿದೆ. ಕಾರಣ ಅವರು ಪರಕೀಯರೆಂದು ನೀವು ಹೇಳುವದು, ದುರಂತಮಯವಲ್ಲದಿದ್ದರೆ ಕನಿಷ್ಠ ಹಾಸ್ಯಾಸ್ಪದವಾಗಿರುವದು. ಪೋರ್ತುಗೀಜರು, ಅವರ ಉದ್ದೇಶ ಉದಾತ್ತವಿರಲಿ ಅಥವಾ ಸಾಮ್ರಾಜ್ಯಲಾಲಸೆಯಿಂದ ತುಂಬಿರಲಿ, ಪರಕೀಯರೇ ಸರಿ.

ಜಾತಿಭೇದ ನಿರ್ಮೂಲ ಮಾಡಲಾಗಿದೆಂದು ನೀವು ಒದರುಡಿದಿರುವಿರಿ ಆದರೆ ನನಗೆ ತೋರಿಬಂದಂತೆ ಅದು ನಿಮ್ಮಿಂದ ಸಾಧ್ಯವಾಗಿಲ್ಲವಷ್ಟೆ ಅಲ್ಲ ಇದ್ದಿಯ ಜಾತಿಗಳಿಗೆ ಮತ್ತೊಂದನ್ನು ಹೊಸದಾಗಿ ಸೇರಿಸಿರುವಿರಿ.

ಅದೆ ದರಿದ — ಪೋರ್ತುಗೀಜ ಸರಕಾರದ ಔದಾರ್ಯ, ನಾಗರಿಕ ಹಕ್ಕು, ಜಾತಿಭೇದ ಇವುಗಳ ಬಗ್ಗೆ ಇದ್ದ ನಿಮ್ಮ ಈಗಿನ ಅಭಿಪ್ರಾಯವನ್ನು ಮರೆತು ಅಫ್ರಿಕೆಯ ಪೋಲೀಸರನ್ನು ಹಿಂದಕ್ಕೆ ಕರೆಸಿಕೊಂಡು ನಾಗರಿಕರ ಹಕ್ಕುಗಳನ್ನು ದಯಪಾಲಿಸುವಿರೆಂದೂ ಸಾಧ್ಯವಾದರೆ, ಗೋವೆಯ ರಾಜ್ಯಘಟನೆ ರಚಿಸುವಂತೆ ಗೋಮಾಂತಕರನ್ನೇ ಕೇಳಿಕೊಳ್ಳುವಿರೆಂದೂ, ಆ ಕೆಲಸದಲ್ಲಿ ಅನುಭವಿಕ ಭಾರತೀಯರ ಸಹಾಯ ಪಡೆಯುವಿರೆಂದೂ ನಾನು ಆಶಿಸುತ್ತೇನೆ.

ತಮ್ಮ
ಮೋ. ಕ. ಗಾಂಧಿ

ಸೂಚನೆ—ನಿಮ್ಮ ಪತ್ರ ಮೊದಲು ವೃತ್ತಪತ್ರದಲ್ಲಿ ಪ್ರಕಟವಾದುದರಿಂದ ನಾನಾದರೂ ಇದನ್ನು ಹರಿಜನದಲ್ಲಿ ಪ್ರಸಿದ್ಧಿಸಿದ್ದೇನೆ.

# ಪ್ರಶ್ನ—ಪೆಟ್ಟಿಗೆ

## ಮುಖ್ಯಾಂಶವೇ ಮರೆತಿದೆ

'ಸ್ವಾತಂತ್ರ್ಯ'ವನ್ನು ಕುರಿತು ಹರಿಜನದ ಜುಲೈ ತಿಂಗಳಿನ ೨೮ನೇ ದಿನಾಂಕದ ಸಂಚಿಕೆಯಲ್ಲಿ ಪ್ರಸಿದ್ಧವಾದ ಲೇಖವನ್ನು ಬಹಳ ಆಸ್ಥೆಯಿಂದ ಓದಿದ ಬ್ರಿಟಿಶ ಸೈನ್ಯಾಧಿಕಾರಿಯೊಬ್ಬನು ಕೆಳಗಿನ ಪ್ರಶ್ನೆಗಳನ್ನು ಕೇಳಿರುವನು. ಈ ಅಧಿಕಾರಿಯು ಅಮೇರಿಕೆ ಯುರೋಪುಗಳಲ್ಲೆಲ್ಲ ಸಂಚಾರಮಾಡಿದವನಿರುವನು. ಮತ್ತು ಜರ್ಮನಿಯಲ್ಲಿಯ ಯುದ್ಧದ ಭೀಕರ ದೃಶ್ಯಗಳನ್ನು ಕಣ್ಣಾರೆ ನೋಡಿರುವನು.

ಪ್ರಶ್ನೆ:—೧ ಈ ಆದರ್ಶ ಪ್ರಭುತ್ವದಲ್ಲಿ (ಅದು ಆದರ್ಶವೆಂಬಲ್ಲೇನೂ ಸಂಶಯವಿಲ್ಲ) ಹೊರದಾಳಿಯ ಭಯವನ್ನು ತಪ್ಪಿಸಿಕೊಳ್ಳುವ ವಿಷಯದ ಬಗ್ಗೆ ಹೇಗೆ ನಿಶ್ಚಿಂತರಾಗಬಹುದು? ಯಂತ್ರಯುಗದ ಫಲಗಳಾದ ಆಧುನಿಕ ಶಸ್ತ್ರಾಸ್ತ್ರಗಳಿಂದ ಸುಸಜ್ಜಿತವಾದ ಆಧುನಿಕ ಸೈನ್ಯವು ಇಲ್ಲದಿದ್ದರೆ ಆ ರಾಷ್ಟ್ರದ ಮೇಲೆ ಆಧುನಿಕ ಶಸ್ತ್ರಾಸ್ತ್ರಸನ್ನಾಹವುಳ್ಳ ಪರಚಕ್ರದ ಅಭಿಯೋಗವು ಅನಾಯಾಸವಾಗಿ ಆಗಬಲ್ಲದು ಮತ್ತು ಅಲ್ಲಿಯ ಜನರನ್ನು ಅಡಿಯಾಳುಗಳನ್ನಾಗಿ ಮಾಡಿಕೊಳ್ಳಬಹುದು.

ಉತ್ತರ:— ನನ್ನ ಲೇಖವನ್ನು ತಿರುಗಿತಿರುಗಿ ಓದಿರುವದಾಗಿಯೂ ಅದು ಮನಸ್ಸಿಗೆ ಬಂದಿರುವದಾಗಿಯೂ ಹೇಳುವ ಈ ಸೈನ್ಯದ ಜೆಯ ಪ್ರಶ್ನಕನು ಯಾವುದೊಂದು ರಾಷ್ಟ್ರವು ಅಥವಾ ಗುಂಪು ಎಷ್ಟೇ ಸಣ್ಣದಿದ್ದರೂ ಅದರಲ್ಲಿ ಜಿಗುಟತನವಿದ್ದು ಗಟ್ಟಿಮನಸುಮಾಡಿದರೆ ಒಬ್ಬ ವ್ಯಕ್ತಿಯಂತೆ ಇಡೀ ಜಗತ್ತೆಲ್ಲ ದಂಡೆತ್ತಿಬಂದರೂ ಅದನ್ನು ಎದುರಿಸಿ ತನ್ನ ಗೌರವ ಸ್ವಾಭಿಮಾನಗಳನ್ನು ರಕ್ಷಿಸಿಕೊಳ್ಳಬಲ್ಲದೆಂಬ ಮುಖ್ಯಾಂಶವನ್ನೇ ಮರೆತಿರುವನು. ನಿಃಶಸ್ತ್ರರ ಅನುಪಮ ಸಾಮರ್ಥ್ಯ ಸೌಂದರ್ಯಗಳು ಅದರಲ್ಲಿ ಅಡಗಿವೆ. ಯಾವದೇ ಅವಸ್ಥೆಯಲ್ಲಿಯೂ ಸೋಲನರಿಯದ ಸೋಲಿಗೊಪ್ಪಿಕೊಳ್ಳದ ಅಹಿಂಸಾತ್ಮಕ ರಕ್ಷಣೆಯೇ ಅದು. ಆದುದರಿಂದ ಅಹಿಂಸೆಯನ್ನೇ ತನ್ನ ಅಂತಿಮ ಧೋರಣವೆಂದು ಒಪ್ಪಿಕೊಂಡ ರಾಷ್ಟ್ರವಾಗಲಿ ಇಲ್ಲವೆ ಗುಂಪಾಗಲಿ ಅಣುಬಾಂಬಿನಿಂದ ಕೂಡ ಅಡಿಯಾಳತನಕ್ಕೆ ಗುರಿಯಾಗಲಾರದು.

## ಆಹಾರದ ಕೊರತೆಯೇಕೆ?

ಪ್ರಶ್ನೆ:—೨ ತನ್ನ ಜನರಿಗೆಲ್ಲ ಬೇಕಾಗುವಷ್ಟು ಆಹಾರ ಸಾಮಗ್ರಿಯನ್ನು ಕೊಳ್ಳಲು ಅದರ ಬೆಲೆಯ ಸಲುವಾಗಿ ಇತರ ಸರಕುಗಳನ್ನು ಅದು ಮಾರಲೇಬೇಕು. ಮತ್ತು ಇಂತಹ ಸರಕುಗಳನ್ನು ಮಾರಲೋಸುಗ ಹಿಂದುಸ್ತಾನವು ಅಗ್ಗಬೆಲೆಗೆ ಅವು ಇತರರಿಗೆ ದೊರೆವಂತೆ ಮಾಡಬೇಕು. ಇದು ಆಧುನಿಕ ಯಂತ್ರಗಳಿಲ್ಲದೆ ಸಾಧ್ಯವಿಲ್ಲೆಂದು ನನ್ನ ಮತ. ಯಂತ್ರವು ಮಾನವ ದುಡಿಮೆಯ ಸ್ಥಾನವನ್ನಾಕ್ರಮಿಸದೆ ಇದು ಹೇಗೆ ಸಾಧ್ಯ?

ಉತ್ತರ:— ಪ್ರಶ್ನೆಯ ಮೊದಲನೇ ವಾಕ್ಯದಲ್ಲಿಯ ವಿಧಾನವೆಲ್ಲ ತಪ್ಪಾಗಿದೆ. ಅನೇಕರು ವಿರುದ್ಧ ಅಭಿಪ್ರಾಯವನ್ನು ಕೊಟ್ಟಿದ್ದರೂ ಹಿಂದುಸ್ತಾನವು ಸಾಕಷ್ಟು ಆಹಾರ ಸಾಮಗ್ರಿಯನ್ನು ಈಗ ಕೂಡ ಹುಟ್ಟಿಸಬಲ್ಲದೆಂದು ನನ್ನ ಅಭಿಪ್ರಾಯ. ಸಾಕಷ್ಟು ಆಹಾರೋತ್ಪಾದನೆಯಾಗಬೇಕಾದರೆ ಏನು ಮಾಡಬೇಕೆಂಬುದನ್ನು ಹಿಂದೆ ನಾನು ಹೇಳಿದ್ದೇನೆ. ತನ್ನ ಕರ್ತವ್ಯವನ್ನುಬಲ್ಲ ಮತ್ತು ಲಾಭಬಡಕತನ ಕಳ್ಳಪೇಟೆ, ಮತ್ತು ಎಲ್ಲಕ್ಕಿಂತಲೂ ಕೆಡುಕಾದ ಮಾನಸಿಕ ಮತ್ತು ದೈಹಿಕ ಜಾಡ್ಯವನ್ನು ನಿರ್ಮೂಲಗೊಳಿಸುವಂತಹ ಕೇಂದ್ರ ರಾಷ್ಟ್ರೀಯ ಸರಕಾರವಾಗಬೇಕು.

ಪ್ರಶ್ನೆಯ ಪೂರ್ವಾರ್ಧಕ್ಕೆ ನಾನಿತ್ತಿರುವ ಉತ್ತರವು ಸರಿಯೆಂದಾದರೆ ಅದರ ಉತ್ತರಾರ್ಧವು ಅನವಶ್ಯಕವಾಗುತ್ತದೆ. ಆದರೆ ಹಿಂದುಸ್ತಾನದಲ್ಲಿ ವಿಪುಲವಾಗಿ ದೊರೆಯುತ್ತಿರುವ ಮಾನವ ದುಡಿಮೆಯ ವಿರುದ್ಧ ನಡೆದಿರುವ ಆಧುನಿಕ ಯಂತ್ರದ ಪರವಾಗಿದ್ದ ವಾದವನ್ನು ಖಂಡಿಸುವ ಸಲುವಾಗಿ ನಾನು ಹೀಗೆ ಹೇಳಬಹುದು. ಎಲ್ಲ ಸಶಕ್ತ ಜನರು ಏಕೀಭಾವದಿಂದಲೂ ಉತ್ಸಾಹದಿಂದಲೂ ವೈಮನಸ್ಸು ಮರಿದು ದುಡಿದರೆ ಆಧುನಿಕ ಯಂತ್ರಸನ್ನಾಹಗಳಿಂದ ಸುಸಜ್ಜಿತವಾದ ಎಂತಹ ರಾಷ್ಟ್ರವನ್ನಾದರೂ ಅವರು ಲೀಲಾಜಾಲವಾಗಿ ಎದುರಿಸಬಲ್ಲರು. ಅಶಕ್ತರಾಷ್ಟ್ರಗಳೆಂದು ಮುದ್ರೆಯೊತ್ತಲಾದ ಯಂತ್ರರಹಿತ ರಾಷ್ಟ್ರಗಳನ್ನು ಸುಲಿಯುವದರಲ್ಲಿಯೇ ಆಧುನಿಕ ಯಂತ್ರಗಳು ಇಂದಿನವರೆಗೆ ಸವೆದಿವೆಯೆಂಬ ಮಾತನ್ನು ಪ್ರಶ್ನಕನು ಮರೆಯಬಾರದು. ಈಗ ಕೂಡ ಅತ್ಯಂತ ಆಧುನಿಕ ಆಯುಧಸನ್ನಾಹ ಯಂತ್ರಗಳಿಂದೊಡಗೂಡಿದ ರಾಷ್ಟ್ರಗಳಿಗಿಂತಲೂ ತಾವು ಹೆಚ್ಚು ಬಲವಂತರಾಗಿರುವವೆಂಬ ಅರಿವು ಬಂದರೆ ಕೂಡಲೆ ಅವು 'ಅಶಕ್ತರಾಷ್ಟ್ರಗಳು' ಎಂದು ಕರೆಸಿಕೊಳ್ಳಲೊಪ್ಪುವದಿಲ್ಲಾದುದರಿಂದ 'ಮುದ್ರೆಯೊತ್ತಲಾದ' ಎಂಬ ವಿಶೇಷಣವನ್ನು ಪಯೋಗಿಸಿದ್ದೇನೆ.

## ರಾಟಿಯ ಮೂಲಕ ಸ್ವರಾಜ್ಯ

ಓರ್ವ ಕಾಂಗ್ರೆಸಿಗನು ಹೀಗೆ ಬರೆದಿದ್ದಾನೆ:—

"ಮಿತಿಮೀರಿ ಪ್ರಚಾರಕಾರ್ಯವು ನಡೆದಿದ್ದರು ನೂಲುವ ಹಾಗೂ ನೇಯುವ ಬಗ್ಗೆ ಜನತೆಯಲ್ಲಿ ಆಗಬೇಕಾಗುವಷ್ಟು ಅನುಕೂಲ ಅಭಿಪ್ರಾಯವುಂಟಾಗಿಲ್ಲೆಂಬುದನ್ನು ನೀವು ಒಪ್ಪಬಹುದು. ಪ್ರತಿಯೊಂದು ಕಾಂಗ್ರೆಸ ಸಮಿತಿಯು ಕನಿಷ್ಠ ಪಕ್ಷಕ್ಕೆ ದೊಡ್ಡನಗರಗಳಲ್ಲಿಯ ಸಮಿತಿಗಳು ಇದಕ್ಕಾಗಿ ಒಂದೇ ಬಗೆಯ ಶಿಕ್ಷಣವರ್ಗವನ್ನು ತೆರೆದರೆ ಬಹಳ ಉಪಯೋಗವಾಗುವದೆಂದು ನನ್ನ ತಿಳುವಳಿಕೆ. ಅನೇಕ ಜನರಿಗೆ ವಿಶೇಷತಃ ಬಡವರಿಗೆ ನೂಲುವ ಹಾಗೂ ನೇಯುವ ಕಲೆಯ ಜ್ಞಾನವಿಲ್ಲದುದರಿಂದ ಅವುಗಳನ್ನು ಅವರು ಕೈಕೊಳ್ಳುತ್ತಿಲ್ಲ. ಎಂತಹ ರಾಟಿಗಳು ಹೆಚ್ಚು ಅನುಕೂಲವಾಗಿವೆ. ಯಾವುವು ಹೆಚ್ಚು ನೂಲು ಕೊಡಬಲ್ಲವು ಅವುಗಳನ್ನು ಹೇಗೆ ನಡೆಸಬೇಕು ಮತ್ತು ನೂತ ನೂಲನ್ನು ಹೇಗೆ ಉಪಯೋಗ ಮಾಡಬೇಕು ಇವೇ ಮೊದಲಾದ ವಿಷಯಗಳ ತಿಳಿವು ಅವರಿಗಿರುವದಿಲ್ಲ. ವಾರಕ್ಕೊಂದು ಸಲ ಇಲ್ಲವೆ ಎರಡು ಸಲ ಇಂತಹ ಶಿಕ್ಷಣವರ್ಗಗಳನ್ನು ಆರಂಭಿಸಿದರೆ ಯೋಗ್ಯಪ್ರಚಾರದ ಬಳಿಕ ಮತ್ತು ಪ್ರಾತ್ಯಕ್ಷಿಕೆಗಳ ಮೂಲಕ ಅದರ ತಂತ್ರಜ್ಞಾನವನ್ನು ಮಾಡಿಕೊಟ್ಟನಂತರ ಇದರಲ್ಲಿ ಬಹಳ ಸುಧಾರಣೆಯಾಗಬಹುದು. ಕನಿಷ್ಠ ಪಕ್ಷಕ್ಕೆ ಕಾಂಗ್ರೆಸಿಗರು ಮಾಡತಕ್ಕ ಒಂದು ಯೋಗ್ಯ ಪ್ರಯೋಗವಿದು. ನಿಯಮಿತವಾಗಿ ವರ್ಗಗಳನ್ನು ನಡೆಸದಿದ್ದರೂ ಇದರ ತಂತ್ರವನ್ನರಿತವರ ಒಂದಾಗಲಿ ಹಲವಾಗಲಿ ತಂಡಗಳು ಅಲ್ಲಲ್ಲಿ ಸಂಚಾರ ಮಾಡುತ್ತ ಪ್ರತಿಯೊಂದು ನಗರದಲ್ಲಿ ಕೆಲಕೆಲವು ದಿನಗಳವರೆಗೆ ಪ್ರಾತ್ಯಕ್ಷಿಕೆಗಳನ್ನು ಮಾಡಿ ಜನರಿಗೆ ಜ್ಞಾನದಾನಮಾಡುತ್ತ ಹೋದರೆ ಅದರಿಂದ ಬಹುಮಟ್ಟಿಗೆ ಉದ್ದೇಶ ಸಿದ್ಧಿಯಾಗುವದು."

ಕಾಂಗ್ರೆಸಿಗರ ಕಡೆಯಿಂದ ಅನೇಕ ಸಲ ಈ ಬಗೆಯ ಪ್ರಶ್ನೆಗಳು ನನ್ನೆಡೆಗೆ ಬರುತ್ತಿವೆ. ಇದು ಸಾಕಷ್ಟು ಸರ್ವಾಂಗಪೂರ್ಣವಾಗಿರುವದರಿಂದ ಇದನ್ನು ಇದ್ದಕ್ಕಿದ್ದಂತೆ ಇಲ್ಲಿ ಎತ್ತಿ ಇಳಿಸಿದ್ದೇನೆ. ಅಂಕಿತವು ಅಸ್ಪಷ್ಟವಾಗಿದೆ. ಆದುದರಿಂದ ಪ್ರಶ್ನಕನು ಯಾವ ಪ್ರಾಂತದವನೆಂದು ಹೇಳಲಿಕ್ಕೆ ನನ್ನಿಂದಾಗದು. ನಿಜವಾಗಿ ಪ್ರಶ್ನಕನು ಹಿಂದುಸ್ತಾನಿಯಲ್ಲಿ ತನ್ನ ಪತ್ರವನ್ನು ಬರೆಯುವ ಸೌಜನ್ಯವನ್ನು ತೋರಿದ್ದರೆ ಹೆಚ್ಚು ಒಳಿತಾಗುತ್ತಿದ್ದಿತು. ಕಾಂಗ್ರೆಸಿನ ರಜಿಸ್ಟರದಲ್ಲಿ ಹೆಸರಿಲ್ಲದಿದ್ದರೂ ಹೆಸರಿದ್ದವರಿಗಿಂತಲೂ ಹೆಚ್ಚು ಕಾಂಗ್ರೆಸ ಭಕ್ತರಗಿರುವ ಅಪಾರ ಸಂಖ್ಯೆಯ ಕಾಂಗ್ರೆಸಿಗರಿಗೆ ಅಂಗ್ಲಭಾಷೆಯ ಪರಿಚಯವಿಲ್ಲ ಮತ್ತು ಅಂಗ್ಲಭಾಷೆಯ ಜ್ಞಾನವಿದ್ದವರಿಗೆ ಕಾಂಗ್ರೆಸ ರಜಿಸ್ಟರದಲ್ಲಿ ತಮ್ಮ ಹೆಸರು ಬರಬೇಕೆಂಬ ಕಡೆಗೆ ಹೆಚ್ಚು ಗಮನವಿರುವದಲ್ಲದೆ ನೂಲುವ ಕಡೆಗೆ ಇಲ್ಲ. ಇದರ ಕಾರಣ ಅವರಿಗೆ ಗೊತ್ತಿದೆ. ನಾನೇನೂ ಒಡೆದು ಹೇಳುವ ಅಗತ್ಯವಿಲ್ಲ. ಏನೇ ಇರಲಿ, ಲೇಖಕನ ಬರಹದಲ್ಲಿ ಬಹಳ ಸಾರವಿದೆ. ಖಾದಿ ಬಟ್ಟೆಯು ಸಿದ್ಧವಾಗುವವರೆಗಿನ ಹಿಂದು ಮುಂದಿನ ಎಲ್ಲ ನೂಲುವ ಕ್ರಮಗಳನ್ನು ಕಲಿಸುವ ಸಂಸ್ಥೆಗಳು ಕಾಂಗ್ರೆಸ ಸಮಿತಿಗಳಾದರೆ ಹಳ್ಳಿಗಳ ಸ್ವರೂಪವೇ ಬದಲಾಗಿ ಜನಜಂಗುಳಿಯ ಪ್ರಯತ್ನದಿಂದ ಸ್ವರಾಜ್ಯ ಸಿದ್ಧಿಯು ಬೇಗ ಆಗುವದು. ಅದು ಹೇಗೆ ಕೈಗೂಡುವದೆಂಬುದನ್ನು 'ಹರಿಜನ'ದ ಅಂಕಗಳಲ್ಲಿ ನಾನು ತೋರಿಸಿದ್ದೇನೆ. ಪತ್ರಲೇಖಕನ ಅಭಿಪ್ರಾಯಾಂಶವನ್ನು ಒತ್ತಿ ಹೇಳಲು ಈ ಸಾಲುಗಳನ್ನು ಬರೆಯಲಾಗಿದೆ.

ಸೇವಾಗ್ರಾಮ — ಮೋ. ಕ. ಗಾಂಧಿ

೮-೮-೧೯೪೬

# ಸತ್ಯಜ್ಞಾನ ಮಂದಿರ

ಮೇಲಿನ ಹೆಸರು ಗಾಂಧೀಜಿ ಮುಂಬಯಿಗೆ ಹೊರಡುವ ಮೊದಲು ಉದ್ಘಾಟನೆ ಮಾಡಿದ ಮೂಲ ಶಿಕ್ಷಣದ ಉಪಾಧ್ಯಾಯರ ತರಬೇತಿಯ ಸಂಸ್ಥೆಗೆ ಉಚಿತವೊ ಅಲ್ಲವೊ ನಾನರಿಯೆ. ಮೂಲ ಹೆಸರನ್ನು ಅಕ್ಷರಶಃ ಭಾಷಾಂತರಿಸಿದರೆ ಅದು "ನೂತನ ಶಿಕ್ಷಣ ಮಂದಿರ" ಎಂದಾದೀತು. ಆದರೆ ಅದು ಯಾವ ಭಾವನೆಯಿಂದ ಕಲ್ಪಿಸಲ್ಪಟ್ಟದೆಯೋ ಆ ಭಾವನೆಯ ಕಾರಣದಿಂದ ಅದಕ್ಕೆ ಮೇಲಿನ ಹೆಸರು ಕೊಡುವ ಆಸೆಯುಂಟಾಗಿದೆ. ಏಕೆಂದರೆ ಗಾಂಧೀಜಿಯವರನ್ನು ಈ ಸಂಸ್ಥೆಯ ಉದ್ಘಾಟನೆ ಮಾಡಬೇಕೆಂದು ಕೇಳಿಕೊಂಡಾಗ ಶ್ರೀಮತಿ ಆಶಾದೇವಿಯವರು ಸತ್ಯವನ್ನು ಸ್ತುತಿಸುವ ಉಪನಿಷನ್ಮಂತ್ರಗಳನ್ನು ಪಠಿಸಿ ಈ ಸಂಸ್ಥೆಗೆ ಆ ಸತ್ಯವೊಂದೇ ತಳಹದಿಯೆಂದು ಸಾರಿದರು. ಈ ಪ್ರತಿಜ್ಞೆಯನ್ನು ಒಳಗೊಂಡಿರುವ ವಿಶಿಷ್ಟ ಮಂತ್ರದ ಅರ್ಥವಿಂತಿದೆ:— "ಉಚಿತವನ್ನೆ ನುಡಿಯುವೆ (ಮಾಡುವೆ?) ಸತ್ಯವನ್ನೆ ನುಡಿಯುವೆ. ಅದು ನನ್ನನ್ನು ಕಾಪಾಡಲಿ." (ಋತಂ ವದಿಷ್ಯಾಮಿ। ಸತ್ಯಂ ವದಿಷ್ಯಾಮಿ। ತನ್ಮಾಮವತು॥).

ಆ ದಿನದ ಭಾಷಣದ ವಸ್ತುವನ್ನು ಒದಗಿಸಲು ಗಾಂಧೀಜಿಗೆ ಈ ಮಂತ್ರವೇ ಸಾಕಾಯಿತು. ಅವರ ಭಾಷಣ ಗಂಭೀರ ಧಾರ್ಮಿಕ ಸ್ವರೂಪವನ್ನು ಧರಿಸಿತು. ಇದರಿಂದ ೧೯೩೧ರಲ್ಲಿ ಸ್ವಿಝರ್ಲಂಡಿನಲ್ಲಿ ಶ್ರದ್ಧಾಳು ಶಾಂತಿವಾದಿಗಳ ಸಭೆಯೊಂದರಲ್ಲಿ ಗಾಂಧೀಜಿ ಮಾಡಿದ ಭಾಷಣವೊಂದು ನನ್ನ ಮನಸಿನಲ್ಲಿ ಬಂದಿತು. "ಸತ್ಯವೇ ದೇವರೆಂದು ನೀವೇಕೆ ಬಗೆಯುವಿರಿ?" ಎಂಬ ಪ್ರಶ್ನೆಗೆ ಉತ್ತರವಾಗಿ ಅವರು ಮಾತಾಡಿದ್ದರು. ಅವರು ಅಂದದ್ದು:—

"ಬಾಲ್ಯದಲ್ಲಿಯೇ ನನಗೆ ಹಿಂದೂ ಧರ್ಮ ಗ್ರಂಥಗಳಲ್ಲಿ ಸಹಸ್ರನಾಮ (ದೇವರ ಸಾವಿರ ಹೆಸರುಗಳು) ಎಂದು ಹೆಸರಾದ ಸ್ತೋತ್ರವನ್ನು ಪಠಿಸಲು ಕಲ್ಪಿಸಿದ್ದರು. ಈ ಸಹಸ್ರನಾಮ ಪರಮಾತ್ಮನ ಎಲ್ಲ ಹೆಸರುಗಳನ್ನು ಹೇಳಿ ಮುಗಿಸಿದೆಯೆಂದು ಸರ್ವಥಾ ಅರ್ಥವಲ್ಲ. ಜಗತ್ತಿನಲ್ಲೆಷ್ಟು ಜೀವಿಗಳಿವೆಯೋ ಅಷ್ಟೇ ಹೆಸರುಗಳು ಪರಮಾತ್ಮನಿಗಿವೆಯೆಂದು ನಮ್ಮ ನಂಬಿಗೆ—ಅದು ಸತ್ಯವೆಂಬೂ ನನ್ನಣಿಕೆ. ಆದುದರಿಂದ ನಾವು ಅವನನ್ನು ಅನಾಮನೆಂದು ಕರೆಯುತ್ತೇವೆ. ದೇವರಿಗೆ ಅನಂತರೂಪಗಳಿರುವದರಿಂದ ಅವನನ್ನು ಅರೂಪನೆಂದೂ ನಾವು ಭಾವಿಸುತ್ತೇವೆ. ಅಂತೆಯೆ ಅವನು ಅಸಂಖ್ಯ ಜಿಹ್ವೆಗಳಿಂದ ಮಾತಾಡುತಿರುವದರಿಂದ ಅವನು ಅವಾಕ್, ಇತ್ಯಾದಿ ನಾನು ಇಸ್ಲಾಮನ್ನು ಅಭ್ಯಸಿಸಿದಾಗ ಇಸ್ಲಾಮಿನಲ್ಲಿಯೂ ದೇವರಿಗೆ ಅನೇಕ ಹೆಸರುಗಳಿವೆಯೆಂದು ಕಂಡುಕೊಂಡೆ.

"ದೇವರೆಂದರೆ ಪ್ರೇಮ ಎಂಬುವರೊಡನೆ ನಾನೂ ದನಿಗೂಡಿಸಬಲ್ಲೆ. ಆದರೆ ನನ್ನ ಅಂತರಂಗದ ಆಳದಲ್ಲಿ ದೇವರು ಪ್ರೇಮವಾಗಿರಬಹುದಾದರೂ ಎಲ್ಲಕ್ಕೂ ಮಿಕ್ಕಿ ದೇವರು ಸತ್ಯ, ಎಂದು ಅಂದುಕೊಳ್ಳುತಿದ್ದೆ. ದೇವರ ಪರಿಪೂರ್ಣ ವರ್ಣನೆ ಮಾಡುವದು ಮನುಜನ ನಾಲಗೆಗೆ ನಿಲುಕುವ ಕೆಲಸವಾಗಿದ್ದಲ್ಲಿ, ನನ್ನ ಪಾಲಿಗೆ ದೇವರೆಂದರೆ ಸತ್ಯವೆಂಬ ಸಿದ್ಧಾಂತವೇ ಸರಿ. ಆದರೆ ಎರಡು ವರ್ಷದ ಕೆಳಗೆ ನಾನು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ 'ಸತ್ಯವೇ ದೇವರು' ಎಂದು ಹೇಳಿದೆ. 'ದೇವರೇ ಸತ್ಯ' ಮತ್ತು 'ಸತ್ಯವೇ ದೇವರು' ಎಂಬೀ ಎರಡು ಹೇಳಿಕೆಗಳಲ್ಲಿನ ಸೂಕ್ಷ್ಮವಾದ ಭೇದವನ್ನು ನೀವು ಗಮನಿಸಬಹುದು. ಸುಮಾರು ೫೦ ವರ್ಷ ಕೆಳಗೆ ಪ್ರಾರಂಭವಾದ ನನ್ನ ಅವಿರತ, ನಿಷ್ಠುರ ಸತ್ಯಶೋಧನೆಯ ಪರಿಣಾಮವಾಗಿ ಈ ನಿರ್ಣಯಕ್ಕೆ ಬಂದಿದ್ದೇನೆ. ಆಮೇಲೆ ನಾನು ಸತ್ಯದ ಅತ್ಯಂತ ಸಮೀಪಕ್ಕೆ ಬರುವ ಸಾಧನ ಪ್ರೇಮವೆಂದು ಕಂಡುಕೊಂಡೆ. ಆದರೆ ಪ್ರೇಮ ಶಬ್ದಕ್ಕೆ (ಕನಿಷ್ಠ) ಇಂಗ್ಲೀಷ ಭಾಷೆಯಲ್ಲಾದರೂ ಅನೇಕ ಅರ್ಥಗಳಿವೆಯೆಂದೂ ಕಾಮಸೂಚಕವಾದ ಮಾನವ ಪ್ರೇಮ ಬಹಳ ಅಧಮ ವಸ್ತುವಾಗಲೂ ಬಲ್ಲದೆಂದೂ ನನಗೆ ಗೊತ್ತಾಯಿತು. ಅಹಿಂಸಾರ್ಥಕವಾದ ಪ್ರೇಮದ ಆರಾಧಕರು ಜಗತ್ತಿನಲ್ಲಿ ತೀರ ವಿರಳರೆಂದು ಕೂಡ ನನಗೆ ಅರಿವು ಬಂತು. ಆದರೆ ಸತ್ಯದ ವಿಷಯದಲ್ಲಿ ದ್ವಿಯಾರ್ಥ ಮಾತ್ರ ಇಲ್ಲವೆಂದು ನನಗೆ ತಿಳಿಯಿತು. ನಾಸ್ತಿಕರು ಕೂಡ ಸತ್ಯದ ಅವಶ್ಯಕತೆಯನ್ನಾಗಲಿ ಶಕ್ತಿಯನ್ನಾಗಲಿ ಅಲ್ಲಗಳೆದಿಲ್ಲ. ಆದರೆ ಸತ್ಯಜಿಜ್ಞಾಸೆಯ ಭರದಲ್ಲಿ ನಾಸ್ತಿಕರು ದೇವರ ಅಸ್ತಿತ್ವವನ್ನೆ ಅಲ್ಲಗಳೆಯಲು ಸಹ ಹಿಂದೆಮುಂದೆ ನೋಡಿಲ್ಲ. ಅವರ ದೃಷ್ಟಿಯಲ್ಲಿ ಇದು ಸರಿಯಾದುದೆ. ಈ ತರ್ಕದ ಪರಿಣಾಮವಾಗಿಯೇ ನಾನು, ದೇವರು ಸತ್ಯ, ಎಂದು ಹೇಳುವದಕ್ಕಿಂತ ಸತ್ಯವೇ ದೇವರು ಎಂಬುದು ಹೆಚ್ಚು ಉಚಿತವೆಂಬ ತೀರ್ಮಾನಕ್ಕೆ ಬಂದಿದ್ದೇನೆ. ....... ಈ ತೊಂದರೆಯನ್ನು ಇನ್ನಷ್ಟು ಕೆದರಲು ಕೋಟ್ಯಂತರ ಜನರು ದೇವರ ಹೆಸರು ಹೇಳಿ ಅನಂತ ಅತ್ಯಾಚಾರಗಳನ್ನು ನಡೆಸಿದ್ದಾರೆ. ವೈಜ್ಞಾನಿಕರು ಕೂಡ ಸತ್ಯದ ಹೆಸರಲ್ಲಿ ದುಷ್ಕೃತ್ಯಗಳನ್ನು ಮಾಡುವದಿಲ್ಲವೆಂದಲ್ಲ......... ಹಿಂದೂ ದರ್ಶನದಲ್ಲಿ ಇನ್ನೊಂದು ಸಿದ್ಧಾಂತವುಂಟು— ದೇವರೊಂದೇ ಸತ್ (ಇರುವದು.) ಉಳಿದುದೆಲ್ಲ ಅಸತ್ ಅಥವಾ ಮಿಥ್ಯೆ (ಇಲ್ಲವೇ ಇಲ್ಲ). ಇಸ್ಲಾಮದ ಕಲಿಮಾ—ಇದೇ ಸತ್ಯ ಒತ್ತಿ ಹೇಳಲ್ಪಟ್ಟಿರುವದನ್ನು ನೀವು ನೋಡಬಹುದು. ಅದರಲ್ಲಿ, ದೇವರೊಂದೇ ಇದೆ ಉಳಿದುದಾವದೂ ಇಲ್ಲ, ಎಂದು ಸ್ಪಷ್ಟವಾಗಿ ಪ್ರತಿಪಾದಿಸಲ್ಪಟ್ಟಿದೆ. ವಸ್ತುತಸ್ತು, 'ಸತ್ಯ ಎಂಬ ಸಂಸ್ಕೃತ ಶಬ್ದ 'ಸತ್' ಎಂದರೆ ಯಾವುದು ಇದೆಯೋ ಅದು ಎಂಬದರಿಂದ ವ್ಯುತ್ಪನ್ನವಾಗಿದೆ. ಈ ಮತ್ತು ಇನ್ನೂ ಅನೇಕ ಕಾರಣಗಳಿಗಾಗಿ ನಾನು 'ಸತ್ಯವೇ ದೇವರು' ಎಂಬ ಸೂತ್ರವೇ ಸರ್ವೋತ್ತಮವಾದುದೆಂಬ ಸಿದ್ಧಾಂತಕ್ಕೆ ಬಂದಿರುವೆ. ಸತ್ಯರೂಪಿ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಲು ಅಪೇಕ್ಷಿಸುವವರಿಗೆ ಪ್ರೇಮವೇ ಅಪರಿಹಾರ್ಯ ಸಾಧನ. ಆ ಪ್ರೇಮವೆಂದರೆ ಅಹಿಂಸೆ. ಮತ್ತು ಕೊನೆಯಲ್ಲಿ ಸಾಧ್ಯವೂ ಸಾಧನವೂ ಪರಸ್ಪರಾಶ್ರಯ ಪರ್ಯಾಯ ಶಬ್ದಗಳಾಗಿರುವದರಿಂದ ದೇವರು ಪ್ರೇಮವೆಂದು ಹೇಳಲು ನಾನು ಹಿಂಜರಿಯಲಾರೆ.

"ಸತ್ಯವೆಂದರೆ ನಮ್ಮ ಅಂತರಂಗದೊಳಗಿನ ವಾಣಿ ಏನು ಹೇಳುವದೋ ಅದು. ಸತ್ಯರೂಪಿ ಪರಮಾತ್ಮನ ವೈಯಕ್ತಿಕ ಅನುಸಂಧಾನ ಮಾಡಬೇಕೆಂಬವರು ಅನೇಕ ಪರೀಕ್ಷೆಗಳನ್ನು ದಾಟಿ ಹೋಗಬೇಕಾಗುವದು.........ಸತ್ಯಸಾಗರದ ತರಂಗಗಳಲ್ಲಿ ಈಸಾಡಬೇಕಾದರೆ ನಾವು ನಮ್ಮನ್ನು ಶೂನ್ಯ ರೂಪಕ್ಕೆ ಇಳಿಸಿಕೊಳ್ಳಬೇಕು."

—ಮಹಾದೇವ ದೇಸಾಯಿ

# ಕುದುರೆ ಜೂಜು

ಕುದುರೆ ಜೂಜಿನ ಪರಿಣಾಮವಾಗಿ ಹಣವು ಅಷ್ಟೇಕೆ ಮನುಷ್ಯರು ಹಾಳಾಗುತ್ತಿರುವ ಬಗ್ಗೆ ಈ ಮೊದಲು ಅನೇಕ ಸಲ ಬರೆದಿದ್ದೇನೆ. ಆದರೆ ಕುದುರೆ ಜೂಜಿನ ದುಷ್ಪರಿಣಾಮಗಳು ಮದ್ಯಪಾನಕ್ಕಿಂತಲೂ ಕಡಿಮೆಯಿಲ್ಲೆಂದು ಓರ್ವ ವಿತ್ತ ನಿಷ್ಠುರ ವಚನಗಳುಳ್ಳ ಪತ್ರವನ್ನು ನನಗೆ ಬರೆದಿದ್ದರಿಂದ ಈ ವಿಷಯವಾಗಿ ಇನ್ನೊಮ್ಮೆ ನಾನು ಬರೆಯಬೇಕಾಯಿತು. ಅವನು ಇನ್ನೂ ಹೇಳುವದೇನೆಂದರೆ,

"ಈ ಜೂಜುಗಳು ನಡೆಯುವ ದಿನ ಸ್ಪೇಶಲ ರೇಲ್ವೆ ಗಾಡಿಗಳು ಓಡಾಡುತ್ತವೆ. ಈ ಗಾಡಿಗಳಲ್ಲಿ ಗಾಂಧಿ ಟೋಪಿ ಧರಿಸಿದ ಜನರೇ ಹೆಚ್ಚಾಗಿರುತ್ತಾರೆ. ತಾವು ಕಾಂಗ್ರೆಸಿಗರೆಂದು ಇವರು ಹೇಳಿಕೊಳ್ಳುವರು. ಈ ಜೂಜುಗಳಿಗೆ ಬಂದು ಹಣವನ್ನು ಹಾಳು ಮಾಡುತ್ತಾರೆ. ಈ ಹಣವು ಎಲ್ಲಿಂದ ಬರುತ್ತ ನಮ್ಮ ಪ್ರಾಂತದಲ್ಲೀಗ ಕಾಂಗ್ರೆಸ ಮಂತ್ರಿಮಂಡಳವಿದ್ದರೂ ಅದು ಸುಮ್ಮನೆ ಕುಳಿತಿದೆ. ಈ ದುರಭ್ಯಾಸವನ್ನು ಹತ್ತಿಕ್ಕಲು ಅದು ಪ್ರಯತ್ನಿಸುತ್ತಿಲ್ಲ."

ಕುದುರೆ ಜೂಜು, ನನ್ನ ಅಭಿಪ್ರಾಯದಲ್ಲಿ, ಮದ್ಯಪಾನಕ್ಕಿಂತಲೂ ಹೆಚ್ಚು ಹಾನಿಕರವಲ್ಲದಿದ್ದರೂ ಅವನ್ನು ಒಂದಕ್ಕೊಂದು ಹೋಲಿಸಬಾರದು. ಕುದುರೆ ಜೂಜು ಕಡಿಮೆ ಹಾನಿಕರವಾದ ಕ್ಷಣಕ್ಕೆ ಒಳ್ಳೆಯದಾಗಲಾರದು. ಕುದುರೆ ಜೂಜಿನ ಪೂರ್ಣ ಜ್ಞಾನವು ನನಗಿಲ್ಲ. ಈ ದುರಾಚಾರವನ್ನು ಹತ್ತಿಕ್ಕಲು ಜನತಾಸರಕಾರಕ್ಕೆ ಅಧಿಕಾರವಿದ್ದರೆ ಅವರು ಕೂಡಲೆ ಹಾಗೆ ಮಾಡಬೇಕು ಎಂದಿಷ್ಟೆ ನಾನು ಹೇಳಬಲ್ಲೆ.

ಸೇವಾಗ್ರಾಮ. — ಮೋ. ಕ. ಗಾಂ.

೯-೮-೧೯೪೬. — (ಹರಿಜನ ಬಂಧುವಿನಿಂದ)

# ಕರ್ನಾಟಕ

## ಧಾರವಾಡ

ಧಾರವಾಡ ತಾಲೂಕಿನ ಹುನಗುಂಡಿ, ಮನಸೂರ, ಎರಿಕೊಪ್ಪ ಗ್ರಾಮಗಳಲ್ಲಿ ಅಕ್ರಮವಾಗಿಟ್ಟುಕೊಂಡಿದ್ದ ಕಾಳನ್ನು ಜಪ್ತ ಮಾಡಿ ಕಲೆಕ್ಟರರು ನಿರಪರಾಧಿ ರೈತರ ಮೇಲೆ ಉಗ್ರೋಪಾಯ ಕೈಕೊಳ್ಳಲಿದ್ದರಷ್ಟೆ. ಆದರೆ ಶ್ರೀಗಳಾದ ಕರಮರಕರ, ನೇಸ್ವಿ, ಪಾಟೀಲ ವೀರನಗೌಡರು ಮತ್ತು ದುಂದೂರ ಇವರು ಪೂರೈಕೆ ಮಂತ್ರಿಗಳಲ್ಲಿ ಬಿನ್ನವಿಸಿಕೊಂಡ ಮೇರೆಗೆ ಆ ಪ್ರಸಂಗ ತಪ್ಪಿರುವದು ಈ ತಿಂಗಳಾಂತ್ಯದ ವರೆಗೆ ತಪ್ಪಿಸುವವರ ಮೇಲೆ ಉಗ್ರೋಪಾಯ ಕೈಕೊಳ್ಳುವದಾಗಿ ಕಲೆಕ್ಟರರು ಸಹ ಆಶ್ವಾಸನ ಕೊಟ್ಟಿದ್ದರಿಂದ ರೈತರ ತಮಗೂ ಆಳು-ಹೋಳು ಹಾಗೂ ಬೀಜಗಳಿಗೂ ಸಾಕಷ್ಟು ಕಾಳು ಇಟ್ಟುಕೊಂಡು ಮಿಕ್ಕಿದ್ದನ್ನು ಸರಕಾರಕ್ಕೆ ಒಪ್ಪಿಸಬೇಕೆಂದು ಮೇಲ್ಕಾಣಿಸಿದ ಮಹನೀಯರು ವಿನಂತಿಸಿದ್ದಾರೆ.

ಹಳೇ ಹುಬ್ಬಳ್ಳಿಯಲ್ಲಿ ಕಳೆದ ವಾರ ಕಟಕರದ ಮನೆಯೊಂದು ಕುಸಿದುಬಿದ್ದು ಒಳಗಿದ್ದ ೧೧ ಜನರಿಗೆ ಅಪಾಯವಾಯಿತು. ಅವರಲ್ಲಿ ನಾಲ್ಕು ಜನ ಹೊತು ಪ್ರಾಣಬಿಟ್ಟರು. ಉಳಿದ ಏಳು ಜನರನ್ನು ಪಾರು ಮಾಡಲಾಯಿತು.

ಪರಮಿಟ್ಟು ಇಲ್ಲದೆ ಕತ್ತೆ ಹಾಗೂ ಕುದುರೆಗಳ ಮೇಲೆ ಭತ್ತದ ಚೀಲಗಳನ್ನು ಹೇರಿಕೊಂಡು ಕಳ್ಳಪೇಟೆಗೆ ಸಾಗಿಸುತಿದ್ದರೆಂದು ಹಾವೇರಿಯ ಎಕ್ಸೈಜ ಸಬ್ ಇನಸ್ಪೆಕ್ಟರರು ಅಲದಕಟ್ಟಿಯ ಹತ್ತಿರ ಕೆಲವರನ್ನು ಬಂಧಿಸಿ ವಿಚಾರಣೆಗೆ ಗುರಿಪಡಿಸಿದ್ದಾರೆ. ಇನ್ನೂ ಕೆಲವರು ತಪ್ಪಿಸಿಕೊಂಡಿದ್ದು ಅವರ ಶೋಧ ನಡೆದಿದೆ.

ಕ್ರಾಂತಿಕಾರ ಶ್ರೀ ವಿರುಪಾಕ್ಷಪ್ಪ ಅಂಗಡಿ ಇವರು ಕರ್ನಾಟಕದಲ್ಲಿ ರೈತ ಸಂಘಟನೆಯ ಕಾರ್ಯವನ್ನು ಕೈಕೊಂಡಿರುತ್ತಾರೆ. ಇವರ ಸಂಘವು ಪ್ರತ್ಯೇಕವಾಗಿದ್ದು ಕೆ ಪಿ ಸಿ ಸಿ ಯೊಡನೆ ಸಹಕರಿಸಿ ಕಾರ್ಯ ಮಾಡುವದು.

ಶ್ರೀಮಾನ್ ಎಸ್ ಆರ್ ಕಂಠಿ ಬಿ ಎ ಎಲ್ಎಲ್ ಬಿ, ಎಂ ಎಲ್ ಎ ಇವರು ಶನಿವಾರ ೧೦ ನೇ ದಿನ ಧಾರವಾಡ ಕರ್ನಾಟಕ ಕಾಲೇಜ ಕರ್ನಾಟಕ ಸಂಘವನ್ನು ಉದ್ಘಾಟಿಸಿ, "ಕರ್ನಾಟಕದ ಬಗ್ಗೆ ಕೆಲವು ಯೋಜನೆಗಳು" ಎಂಬ ವಿಷಯ ಕುರಿತು ಭಾಷಣ ಮಾಡಿದರು.

ಕರ್ನಾಟಕ ಕಸ್ತೂರಬಾ ಸ್ಮಾರಕ ನಿಧಿ ಸಮಿತಿಯ ಪ್ರತಿನಿಧಿಗಳಾದ ಶ್ರೀಮತಿ ಉಮಾಬಾಯಿ ಕುಂದಾಪೂರ ಇವರು ಒಂದು ಪ್ರಕಟಣೆಯ ಹೊರಡಿಸಿ, ಕರ್ನಾಟಕ ಮತ್ತು ಮೈಸೂರ ಸಂಸ್ಥಾನಕ್ಕಾಗಿ ಮೈಸೂರ ಹತ್ತರ ಬೆಳವಡಿ ಗ್ರಾಮದಲ್ಲಿ ಇದೇ ೧೫ ಕ್ಕೆ ಪ್ರಾರಂಭವಾದ ಕಸ್ತೂರಬಾ ಗ್ರಾಮಸೇವಿಕಾ ವಿದ್ಯಾಲಯದಲ್ಲಿಯ ೨೦ ಸ್ಥಳಗಳು ಇನ್ನೂ ಪೂರ್ಣ ತುಂಬಿಲ್ಲ. ಬರಲಿಚ್ಛಿಸುವವರು ಈ ತಿಂಗಳಾಂತ್ಯದೊಳಗೆ ಅರ್ಜಿ ಮಾಡಿಕೊಳ್ಳಬೇಕೆಂದು ಕೇಳಿಕೊಂಡಿದ್ದಾರೆ.

ಇದೇ ತಿಂಗಳು ೧೭—೧೮ ಕ್ಕೆ ನಡೆಯಬೇಕಾಗಿದ್ದ ಭಾರತ ಹಿಂದೀ ಪ್ರಚಾರ ಸಭೆಯ ಪರೀಕ್ಷೆಗಳನ್ನು ಅಂಚೆ ಸಂಪಿನಿಂದ ಉಂಟಾದ ಪರಿಸ್ಥಿತಿಯ ಮೂಲಕ ಅಗಸ್ಟ ೩೧ ಮತ್ತು ಸಪ್ಟಂಬರ ೧ ಕ್ಕೆ ಮುಂದರಿಸಲಾಗಿದೆಂದು ಹುಬ್ಬಳ್ಳಿ ಹಿಂದೀ ಪ್ರಚಾರ ಸಮಿತಿಯವರು ಪ್ರಕಟಿಸಿರುತ್ತಾರೆ.

ಧಾರವಾಡ—ಹುಬ್ಬಳ್ಳಿ ರೋಟರಿ ಕ್ಲಬ್ಬಿನದು ಮೊನ್ನೆ ಮೊನ್ನೆ ಧಾರವಾಡದಲ್ಲಿ ಸೇರಿದಾಗ ಧಾರವಾಡ ಜಿಲ್ಲಾ ಲೋಕಲ್ ಬೋರ್ಡ ಇಂಜನಿಯರ ಶ್ರೀ ಅಡಕೆಯವರು "ಧಾರವಾಡ ಜಿಲ್ಲೆಗೊಂದು ಯೋಜನೆ" ಎಂಬ ವಿಷಯ ಕುರಿತು ಮನನೀಯ ಭಾಷಣ ಮಾಡಿದರು. ಧಾರವಾಡ ಜಿಲ್ಲೆಯಲ್ಲಿ ಕೆಳಗಿನ ನೀರಾವರಿ ಯೋಜನೆಗಳನ್ನು ಕೈಕೊಳ್ಳಬೇಕೆಂದು ಅವರು ಸೂಚಿಸಿದರು:— (೧) ಜೋಗಾ ಯೋಜನೆ (೨) ಮಲಪ್ರಭಾ, ವರದಾ, ಧರ್ಮಾ, ಕುಮುದ್ವತಿ ಮತ್ತು ತುಂಗಭದ್ರಾ ನದೀ ತೀರಗಳಲ್ಲಿ ಬುಡಕಿ ನೀರಾವರಿ ಯೋಜನೆ (೩) ಧರ್ಮಾ ನೀರಾವರಿ ಯೋಜನೆ (೪) ತುಂಗಭದ್ರಾ ನೀರಾವರಿ ಯೋಜನೆ (೫) ರಾಮದುರ್ಗ ನೀರಾವರಿ ಯೋಜನೆ (೬) ನೀರಾವರಿಯ ಚಿಕ್ಕ ಚಿಕ್ಕ ಕೆರೆಗಳು ಹಾಗೂ ಈಗಿದ್ದ ಕೆರೆಗಳ ದುರಸ್ತಿ ಮತ್ತು (೭) ಬಾವಿ ನೀರಾವರಿ.

ಜೋಗ ಜಲ ವಿದ್ಯುಚ್ಛಕ್ತಿಯ ಉಪಯೋಗವನ್ನು ಉದ್ಯೋಗಗಳ ಅಭಿವೃದ್ಧಿಗೆ ಪೂರ್ಣ ಉಪಯೋಗಿಸುವದಲ್ಲದೆ ಕಾಳಿ ನದಿಯ ಜಲ ವಿದ್ಯುಚ್ಛಕ್ತಿ ಯೋಜನೆ ಕೈಕೊಳ್ಳಬೇಕೆಂದು ಅವರು ಸೂಚಿಸಿದರು.

ಹಾನಗಲ್ಲ ತಾಲೂಕ ರೈತಪರಿಷತ್ತು ಅಡೂರಿನಲ್ಲಿ ತಾ. ೨೫-೮-೪೬ ನೇ ದಿನ ಸೇರುವದು. ಕಂದಾಯ ಮಂತ್ರಿಗಳಾದ ಶ್ರೀ ಮುರಾರಜಿ ದೇಸಾಯಿಯವರು ಪರಿಷತ್ತನ್ನು ಉದ್ಘಾಟಿಸುವವರಿದ್ದಾರೆ

## ಬೆಳಗಾವಿ

ಬೆಳಗಾವ ಜಿಲ್ಹೆಯಲ್ಲಿ ಒಂದು ತಿಂಗಳು ಸಾಲುವಷ್ಟು ಆಹಾರ ಧಾನ್ಯವಿದೆಯೆಂದು ಜಿಲ್ಹಾ ಮ್ಯಾಜಿಸ್ಟ್ರೇಟರು ಈ ತಿಂಗಳ ಪ್ರಾರಂಭಕ್ಕೆ ಕರೆದಿದ್ದ ಸುದ್ದಿಗಾರರ ಸಭೆಯಲ್ಲಿ ತಿಳಿಸಿದರು.

ಈ ಜಿಲ್ಹೆಯಲ್ಲಿ ಬಟ್ಟೆ ಹಂಚಿಕೆ ಹಾಗೂ ಅದರ ಪರಮಿಟ್ ಕೊಡುವ ಬಗ್ಗೆ ಸಲಹೆ ಕೊಡಲು ಶ್ರೀ ಕುಟ್ರಿ ಎಂ. ಎಲ್. ಎ. ಇವರ ಅಧ್ಯಕ್ಷತೆಯ ಒಂದು ಸಮಿತಿ ನೇಮಿಸಲಾಗಿದೆ.

ಅರ್ಬನ್ ಬ್ಯಾಂಕಿನ ಅಟ್ಟದ ಮೇಲೆ ಶ್ರೀ ಜೀವಣರಾವ ಯಾಳಗಿಯವರ ಅಧ್ಯಕ್ಷತೆಯಲ್ಲಿ ಬೆಳಗಾವಿ ವರ್ತಕರ ಸಭೆ ಸೇರಿ ಮಾರಾಟಕರವನ್ನು ನಿಷೇಧಿಸಲಾಯಿತು. ಆಹಾರ ಧಾನ್ಯಬಿಟ್ಟು ಉಳಿದ ಪದಾರ್ಥಗಳ ಮೇಲಿನ ನಿಯಂತ್ರಣಗಳನ್ನು ತೆಗೆಯಬೇಕೆಂದೂ ಸಭೆಯಲ್ಲಿ ನಿರ್ಣಯಿಸಲಾಯಿತು.

## ವಿಜಾಪುರ

ಇದೇ ಐದನೇ ದಿನಾಂಕದಲ್ಲಿ ಇಂಡಿ ಸ್ಟೇಶನ್ ಹತ್ತರ ಮೋಟರ ಟ್ರಕ್ಕಿಗೆ ಅಪಘಾತ ಸಂಭವಿಸಿ ಮೂವರು ಅಲ್ಲಿಯೇ ಸತ್ತರಲ್ಲದೆ ನಾಲ್ಕನೆಯವನು ಆಸ್ಪತ್ರಿಗೆ ಒಯ್ಯಲ್ಪಟ್ಟ ಮೇಲೆ ಪ್ರಾಣ ಬಿಟ್ಟನು. ಬೇರೆ ೧೨ ಜನರಿಗೆ ಗಾಯಗಳಾಗಿವೆ. ಮೋಟರು ಹೊರಳುವಾಗ್ಗೆ ಅಪಘಾತ ಸಂಭವಿಸಿತು.

ಶ್ರೀ ಸಿಂಧೆಯವರು ಗುಂಡು ಹಾರಿಸಿದ ಖಟ್ಲೆ ವಿಚಾರಣೆ ಪ್ರಾರಂಭವಾಗಿ ಶ್ರೀಗಳಾದ ಮಂಗಳವೇಡೆ, ಸುಗುಣೇಂದ್ರ, ಕೆರೂರ, ಬಳವಳ್ಳಿ ಮ. ಇನಸ್ಪೆಕ್ಟರರ ಸಾಕ್ಷಿಗಳಾಗಿವೆ.

ವಿಜಾಪೂರ ಜಿಲ್ಹಾ ಬಾಗೇವಾಡಿ ತಾಲೂಕಿನ ಹುಣಶ್ಯಾಳ ಮತ್ತು ಗುಡದಿನ್ನಿ ಹಳ್ಳಿಗಳಲ್ಲಿ ಕಳೆದ ಎರಡು ತಿಂಗಳಿಂದ ಚಿಮಣಿ ಎಣ್ಣೆಯನ್ನು ಹಂಚಿರುವದಿಲ್ಲ.

ಬಸವೇಶ್ವರ ಕಾಲೇಜದ ಕರ್ನಾಟಕ ಸಂಘದ ಪ್ರಾರಂಭೋತ್ಸವವು ಕಳೆದ ವಾರ ಶ್ರೀ ಬಸವನಾಳರಿಂದ ನೆರವೇರಿಸಲ್ಪಟ್ಟಿತು.

ಬ್ಯಾ. ಮಾನೆಯವರ ಸ್ಥಳದಲ್ಲಿ ಶ್ರೀ. ಎಸ್ ಆರ್. ಕಂಠಿಯವರು ಮುಂಬೈ ಮಂತ್ರಿ ಮಂಡಲದಲ್ಲಿ ಪಾರ್ಲಮೆಂಟರಿ ಸೆಕ್ರೆಟರಿಗಳಾಗಿ ನೇಮಿಸಲ್ಪಟ್ಟಿದ್ದಾರೆ.

## ಉತ್ತರ ಕನ್ನಡ

ಕಾರವಾರ ತಾಲೂಕ ಕಿಸಾನ ಸಂಘದ ಐದು ಜನ ಅಧಿಕಾರಿಗಳ ಮೇಲೆ ಕ್ರಿ. ಪ್ರೊ. ಕೋಡಿನ ನ್ವಯ ಕ್ರಮ ತೆಗೆದುಕೊಳ್ಳಬೇಕೆಂದು ಯೋಚಿಸಿದ್ದನ್ನು ಹಿಂತೆಗೆದುಕೊಳ್ಳಲು ಮುಂಬಯಿ ಸರಕಾರದವರು ಜಿಲ್ಹಾ ಮ್ಯಾಜಿಸ್ಟ್ರೇಟರಿಗೆ ಸಲಹೆ ಇತ್ತಿದ್ದಾರೆ.

ಕಾರವಾರ ತಾಲೂಕ ಜಮೀನದಾರರು ಇತ್ತೀಚೆಗೆ ಸದಾಶಿವಗಡದಲ್ಲಿ ಸಭೆ ಸೇರಿ ಮುಂಬಯಿ ಕೊಲ ಸಾಗುವಳಿ ಕಾಯಿದೆ ತಿದ್ದುಪಡಿ ಮಸೂದೆಯನ್ನು ಬಲವಾಗಿ ನಿಷೇಧಿಸುವ ನಿರ್ಣಯ ಮಾಡಿದರು.

ಶಿರಸಿಯಲ್ಲಿ ಇತ್ತೀಚೆಗೆ ಅನೇಕ ಕಳವುಗಳಾಗಿದ್ದರೂ ಶೋಧ ಮಾತ್ರ ಒಂದೂ ಆಗಿರುವದಿಲ್ಲ

ಬಂಕಿಕೊಡ್ಲ ಇಂಗ್ಲೀಷ ಶಾಲೆಯಲ್ಲಿ ಕಳೆದ ವಾರ ಶ್ರೀ ಕೈಲಾಸಂರವರ ೬೧ ನೇ ಜನ್ಮದಿನೋತ್ಸವ ಜರುಗಿಸಲ್ಪಟ್ಟಿತು. ಶ್ರೀ ಕೆ. ಜಿ. ಶಾಸ್ತ್ರಿಗಳ ಅಧ್ಯಕ್ಷತೆ ವಹಿಸಿದ್ದರು.

## ಬಳ್ಳಾರಿ

ಹೂವಿನ ಹಡಗಲಿ ತಾಲೂಕ ಬ್ಯಾಲಹುಣಸಿ ಗ್ರಾಮದ ಹತ್ತರ ತುಂಗಭದ್ರಾ ನದಿಯಲ್ಲಿ ಇಟಿಗಿಗೆ ಹೋಗುತ್ತಿದ್ದ ದೋಣಿಗಳೆರಡು ಗಾಳಿಯ ಹೊಡತಕ್ಕೆ ಮುಳುಗಿರುತ್ತವೆ. ಅದರಲ್ಲಿದ್ದ ೪೦ ಜನರಲ್ಲಿ ೨೦ ಜನರು ಜಲಸಮಾಧಿ ಹೊಂದಿದರೆಂದು ತಿಳಿಯುತ್ತದೆ.

ಕಸಗೂಡಿಸುವವರಿಗೆ ತಿಂಗಳಿಗೆ ೩೦ ರೂ. ಮತ್ತು ಉಳಿದವರಿಗೆ ೩೫ ರೂ. ಸಂಬಳ ಕೊಡಬೇಕು, ತುಟ್ಟಿಭತ್ತೆ ಬೇರೆ ಕೊಡಬೇಕು. ಮನೆ ಕಟ್ಟಿಕೊಳ್ಳಲು ಸ್ಥಳ; ಗರ್ಭಿಣಿ ಸ್ತ್ರೀಯರಿಗೆ ಮೂರು ತಿಂಗಳ ಸಂಬಳ ರಜೆ, ಮುನಸಿಪಲ್ ಕೆಳದರ್ಜೆಯ ನವಕರರ ಮಕ್ಕಳಿಗೆ ಉಚಿತ ವಿದ್ಯಾಭ್ಯಾಸದ ಏರ್ಪಾಡು; ವರ್ಷಕ್ಕೆರಡು ಉಡುಪು, ಪ್ರತಿನಿತ್ಯ ೧೬ ಔಂಸ ಆಹಾರ ಧಾನ್ಯ ಮುಂತಾದ ಬೇಡಿಕೆಗಳನ್ನು ಒಂದು ತಿಂಗಳೊಳಗಾಗಿ ಪೂರೈಸದಿದ್ದರೆ ದಿ. ೧೦-೯-೪೬ ರಿಂದ ಸಂಪು ಹೂಡುವದಾಗಿ ಬಳ್ಳಾರಿ ನಗರಸಭೆಯ ಕಸಗೂಡಿಸುವವರು ಮತ್ತು ಕೆಳದರ್ಜೆಯ ನೌಕರರು ನೋಟೀಸ ಕೊಟ್ಟಿರುವರು.

## ಕನ್ನಡ ಸಂಸ್ಥಾನ

ಜಮಖಂಡಿ ಸಂಸ್ಥಾನ ಪ್ರಜಾಪರಿಷತ್ತಿನ ಚೇರಮನ್ ಶ್ರೀ ಎ ವಿ ಸಾಬಡೆಯವರು ದಕ್ಷಿಣ ಸಂಸ್ಥಾನಗಳ ಒಕ್ಕೂಟ ಯೋಜನೆಯನ್ನು ಬಿಟ್ಟು ಬಿಡುವದೇ ಹಿತವೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಮಹಾತ್ಮಾಗಾಂಧಿಯವರು ಒಕ್ಕೂಟ ಯೋಜನೆಯನ್ನು ವಿರೋಧಿಸಿದ್ದರಿಂದ ಸಾಂಗಲಿಯ ಜಿ ಸಾಹೇಬರು ಪ್ರಮುಖ ಪ್ರಜಾಜನರ ಅಭಿಪ್ರಾಯವನ್ನು ಕೇಳುತ್ತಿರುವರು.

ಹೈದರಾಬಾದ ಕರ್ನಾಟಕ ಪರಿಷತ್ತಿನ ಸ್ಥಾಯಿ ಸಮಿತಿಯ ಸಭೆ ಕಳೆದವಾರ ರಾಯಚೂರಲ್ಲಿ ಸೇರಿ ಸಂಸ್ಥಾನ ಕಾಂಗ್ರೆಸ್ಸಿನಲ್ಲಿ ಪರಿಷತ್ತನ್ನು ವಿಲೀನ ಮಾಡುವ ಬಗ್ಗೆ ಸುದೀರ್ಘ ಚರ್ಚೆ ನಡೆದು, ಕೊನೆಗೆ ಕರ್ನಾಟಕ ಪ್ರಾಂತೀಯ ಭಾವನೆಯನ್ನು ಉಳಿಸಿಕೊಂಡು ವಿಲೀನವಾಗಬೇಕೆಂಬ ನಿರ್ಣಯವನ್ನು ಸ್ವೀಕರಿಸಲಾಯಿತು. ಹೈದರಾಬಾದ ಸುಧಾರಣೆಗಳು ತ್ಯಾಜ್ಯವೆಂದೂ ಈ ಸಭೆಯಲ್ಲಿ ನಿರ್ಣಯಿಸಲಾಯಿತು.

ನಿಜಾಮ ಸಂಸ್ಥಾನದಲ್ಲಿ ಇದುವರೆಗೆ ಪ್ರತ್ಯೇಕವಾಗಿ ಕೆಲಸ ಮಾಡುತಿದ್ದ ಮಹಾರಾಷ್ಟ್ರ ಮತ್ತು ಕರ್ನಾಟಕ ಕಾಂಗ್ರೆಸ ಕಮೀಟಿಗಳನ್ನು ಸಂಸ್ಥಾನ ಕಾಂಗ್ರೆಸದಲ್ಲಿ ಸೇರಿಸಬೇಕೆಂದು ಹೈದರಾಬಾದ ಸಂಸ್ಥಾನ ಕಾಂಗ್ರೆಸ ಕಾರ್ಯಸಮಿತಿಯ ಸಭೆಯಲ್ಲಿ ನಿರ್ಣಯವಾಗಿದೆ.

ಸಾಂಗಲಿಯ ಶ್ರೀಮತಿ ಕಾಶೀಬಾಯಿಯವರು ತನ್ನ ಮೇಲೆ ಅತ್ಯಾಚಾರ ನಡೆಸಿದ ಇಂಗಳಿ ಫೌಜದಾರ ಹಾಗೂ ದಾನೋಳಿ ಜಮಾದಾರ ಇವರ ಮೇಲೆ ಖಟ್ಲೆ ಹೂಡಿ ಅವರನ್ನು ವಿಚಾರಣೆ ಮುಗಿವವರೆಗೆ ಕೆಲಸದಿಂದ ದೂರಿರಿಸಬೇಕೆಂದು ಬಿನ್ನವಿಸಿದ್ದಳು ಅದರಂತೆ ಕೊಲ್ಹಾಪುರ ದರಬಾರದವರು ಅವರಿಬ್ಬರನ್ನೂ ಸಸ್ಪೆಂಡ ಮಾಡಿದ್ದಾರೆ.

ಜಮಖಂಡಿಯ ರಾಜೇಸಾಹೇಬರು ತಮ್ಮ ಸಿಂಹಾಸನಾರೋಹಣದ ೨೦ ನೇ ವಾರ್ಷಿಕೋತ್ಸವದ ಶುಭ ಪ್ರಸಂಗದಲ್ಲಿ ಅಗಸ್ಟ ಆಂದೋಲನದಲ್ಲಿ ಶಿಕ್ಷೆಗೆ ಗುರಿಯಾಗಿದ್ದ ೧೭ ರಾಜಬಂದಿಗಳನ್ನು ಬಿಡುಗಡೆ ಮಾಡಿದರು.

ಹೈದ್ರಾಬಾದದ ಹೊಸ ದಿವಾಣರಾದ ಸರ್ ಮಿರ್ಜಾ ಇಸ್ಮಾಯಿಲರು ಅಧಿಕಾರ ಸೂತ್ರ ಸ್ವೀಕರಿಸಿದ ನಂತರ ಆಕಾಶವಾಣಿಯಲ್ಲಿ ಭಾಷಣ ಮಾಡಿ ನಿಜಾಮ ಸಂಸ್ಥಾನದ ಭವಿತವ್ಯ ಉಜ್ವಲವಾಗಿದೆ. ಆದರೆ ಅದಕ್ಕಾಗಿ ನಾವು ಬಹಳ ಹೆಣಗಬೇಕಾಗುವದು. ವೈಯಕ್ತಿಕ ಮತ್ತು ಜಾತೀಯ ದ್ವೇಷ ಮತ್ಸರಗಳನ್ನು ಬಿಡದೆ ಯಾವುದನ್ನೂ ಸಾಧಿಸುವದು ಸಾಧ್ಯವಿಲ್ಲವೆಂದು ಮುಂತಾಗಿ ಹೇಳಿ ಜನರು ಸಹಕಾರದಿಂದ ವರ್ತಿಸಬೇಕೆಂದು ಕೇಳಿಕೊಂಡಿದ್ದಾರೆ.

ರಾಮದುರ್ಗ ಪ್ರಜಾ ಸಂಘದ ಅಧ್ಯಕ್ಷ ಶ್ರೀ ಮುನವಳ್ಳಿ ಹಾಗೂ ಮಹಾದೇವಪ್ಪ ಪಟ್ಟಣಶೆಟ್ಟಿ, ಬಸಪ್ಪ ಮೇಟಿ ಇವರು ೫೦ ಜನ ಕಾರ್ಯಕರ್ತರೊಂದಿಗೆ ಬಳ್ಳಾರಿಯಿಂದ ರಾಮದುರ್ಗಕ್ಕೆ ಇದೇ ದಿನಾಂಕ ೧೧ ಕ್ಕೆ ತೆರಳಿದರು. ಅಲ್ಲಿ ಅವರ ಸಂಭ್ರಮದ ಮೆರವಣಿಗೆ ನಡೆಯಿತು.

ಜಮಖಂಡಿ ಸಂಸ್ಥಾನದಲ್ಲಿ ೧೫೦ ರೂ. ಗಿಂತ ಕಡಿಮೆ ಸಂಬಳವಿರುವ ಎಲ್ಲ ನೌಕರರ ತುಟ್ಟಿಭತ್ತೆಯನ್ನು ೫ ರೂ. ಯಿಂದ ಹೆಚ್ಚಿಸಲಾಗಿದೆ. ಇದರಿಂದ ಅವರಿಗೆ ಇನ್ನು ೧೦ ರೂ. ತುಟ್ಟಿಭತ್ತೆ ದೊರೆಯುವದು.

## ಮುಂಬಯಿ

ಮುಂಬಯಿಯಲ್ಲಿ ಒಂದು ಅಂಗಡಿಯಲ್ಲಿ ಸಾವಿರ ರೂಪಾಯಿಗಳ ನೋಟುಗಳ ಕಳ್ಳಸಂತೆ ನಡೆಯುತ್ತಿದ್ದಾಗ ಆ ಅಂಗಡಿಯನ್ನು ಗುಪ್ತ ಪೋಲೀಸರು ಮುತ್ತಿ ೧೦೦ ಸಾವಿರ ರೂಪಾಯಿಗಳ ನೋಟುಗಳನ್ನೂ ೬ ಐದು ನೂರು ರೂ. ಗಳ ನೋಟುಗಳನ್ನೂ ಜಪ್ತ ಮಾಡಿದರು. ಸಾವಿರ ರೂ. ಗಳ ನೋಟು ೫೫೦ ರೂ. ಗಳಿಗೆ ಮಾರಲ್ಪಡುತ್ತಿತ್ತಂತೆ.

ಅಹಮುದಾಬಾದ, ಸುರತ, ಪುಣೆ, ಸೊಲ್ಲಾಪುರ ಮತ್ತು ಹುಬ್ಬಳ್ಳಿ ಮೊದಲಾದ ಪಟ್ಟಣಗಳಲ್ಲಿ ಪ್ರೌಢಶಿಕ್ಷಣ ಪ್ರಸಾರವನ್ನು ಜೋರಿನಿಂದ ಸಾಗಿಸಲು ಮುಂಬಯಿ ಸರಕಾರದವರು ಈಗ ಯೋಜನೆಗಳ ವಿಚಾರ ನಡೆಸಿರುವರು.

ತೃತೀಯ ಜಾಗತಿಕ ಯುದ್ಧವು ೧೯೪೯ ನೇ ಇಸ್ವಿಯ ಉತ್ತರಾರ್ಧದಲ್ಲಿ ಪ್ರಾರಂಭವಾಗಿ ೧೯೫೩ ಮಾರ್ಚ ಇಲ್ಲವೆ ಮೇ ತಿಂಗಳ ವರೆಗೆ ನಡೆಯುವದು. ಈ ಯುದ್ಧದ ನಂತರ ಭಾರತಕ್ಕೆ ಸಂಪೂರ್ಣ ಸ್ವಾತಂತ್ರ್ಯ ದೊರೆಯುವದು ಮತ್ತು ಅನೇಕ ವರ್ಷಗಳವರೆಗೆ ಯುದ್ಧ ಸಂಭವಿಸುವದಿಲ್ಲವೆಂದು ಪುಣೆಯ ಶ್ರೀ ಎಂ. ವಿ. ಮೀಟ್ಕರರು ಭವಿಷ್ಯ ನುಡಿದಿದ್ದಾರೆ. ಶ್ರೀ ಮೀಟಕರರಿಗೆ ೩೫ ವರ್ಷ ವಯಸ್ಸಿದ್ದು ತಮ್ಮ ೧೨ ನೇ ವಯಸ್ಸಿನಿಂದಲೆ ಅವರು ಅಂತಃಶಕ್ತಿ ಬೆಳೆಸಿಕೊಳ್ಳಲಾರಂಭಿಸಿದರು. ಈ ಅಭ್ಯಾಸಬಲದಿಂದ ಅವರೀಗ ತ್ರಿಕಾಲ ಜ್ಞಾನಿಗಳಾಗಿದ್ದಾರೆ.

ಅಹಮ್ಮದಾಬಾದದಲ್ಲಿ ಜಾತೀಯ ದಂಗೆ ಸಂಭವಿಸಿದಾಗ ಪುಂಡರಿಗೆ ಆಶ್ರಯ ಸ್ಥಾನಗಳಾಗಿದ್ದವೆಂದು ಕಂಡುಬಂದಿರುವ ಆರು ಉಪಹಾರಗೃಹಗಳ ಲಾಯಸನ್ಸನ್ನು ರದ್ದುಗೊಳಿಸಲಾಗಿದೆ. ದಂಗೆಯಲ್ಲಿ ಆದ ಹಾನಿಯು ೮ ಲಕ್ಷ ರೂಪಾಯಿಗಳಿಗೂ ಮೀರುವದೆಂದು ಅಂದಾಜ ಮಾಡಲಾಗಿದೆ.

ಟೆನ್ನೀಜ ಕಂದರ (ಅಮೇರಿಕಾ) ಯೋಜನೆಯಂಥದನ್ನು ನಮ್ಮ ದೇಶದಲ್ಲಿ ಸಾಧಿಸಲು ಬಹಳ ಸಮಯ ಹಿಡಿಯುವದು. ಅದರೂ ತಾಪೀ ನದಿಯ ಮಹಾಪೂರದಿಂದ ಸುರತದ ನೆರೆಹೊರೆಯ ಪ್ರದೇಶಕ್ಕೆ ಹಾನಿಯಾಗದಂತೆ ನೋಡಿಕೊಳ್ಳಬೇಕಾಗಿದೆಂದು ಮುಂಬಯಿಯ ಲೋಕೋಪಯೋಗಿ ಮಂತ್ರಿ ಡಾ. ಗಿಲ್ಡರರು ಸುರತದಲ್ಲಿ ಭಾಷಣ ಮಾಡುತ್ತ ಹೇಳಿದರು.

ಪುಣೆ ನಗರದಲ್ಲಿ ಶಾಂತತೆಯ ರಕ್ಷಣೆಗಾಗಿ ತಾ. ೧೩ ರಿಂದ ಒಂದು ತಿಂಗಳವರೆಗೆ ೧೪೪ ನೆ ಕಲಮು ಜಾರಿಮಾಡಲಾಗಿದೆ.

ಮುಂಬಯಿಯಲ್ಲಿ ಶ್ರೀ. ಟಿ. ಪಿ. ಕೈಲಾಸಂರ ೬೧ ನೇ ಹುಟ್ಟು ಹಬ್ಬವು ಖಾಲಸಾ ಕಾಲೇಜದಲ್ಲಿ ಸಂಭ್ರಮದಿಂದ ಜರುಗಿತು. ಪ್ರೊ. ಇನಾಮದಾರ, ಶ್ರೀಮತಿ ರಂಗಮ್ಮ, ಶ್ರೀ ಆರ್. ಎ. ಜಾಗೀರದಾರ ಹಾಗು ಕೈಲಾಸಮರ ಭಾಷಣಗಳಾದವು

ಅಹಮ್ಮದಾಬಾದ ಮತ್ತು ಬಡೋದೆ ನಡುವೆ ಗ್ರಿಡ್ ವಿದ್ಯುಚ್ಛಕ್ತಿ ಯೋಜನೆಯು ೧೯೪೭ ರ ಅಂತ್ಯದಲ್ಲಿ ಪ್ರಾರಂಭವಾಗುವದು. ಮತ್ತು ಸುರತ-ಮುಂಬಯಿ ನಡುವೆ ೧೯೪೮ ರ ಕೊನೆಯೊಳಗಾಗಿ ಸುರುವಾಗಬಹುದೆಂದು ಡಾ. ಗಿಲ್ಡರರು ತಿಳಿಸಿದರು.

ಅಹಮ್ಮದಾಬಾದದಲ್ಲಿ ಕರ್ಫ್ಯೂ ಆಜ್ಞೆಯನ್ನು ಮತ್ತೊಂದು ವಾರ ಬೆಳೆಸಲಾಗಿದೆ.

ಹಿಂದುಸ್ತಾನ ಸರಕಾರದವರು ಒಂದು ಪ್ರಕಟನೆ ಹೊರಡಿಸಿ ಚಿನ್ನದ ಮೇಲಿನ ಅಯಾತ ಸುಂಕವನ್ನು ತೊಲೆಗೆ ೨೫ ರೂ. ಇದ್ದುದನ್ನು ೧೨॥ ರೂ. ಗಳಿಗೆ ಮತ್ತು ಬೆಳ್ಳಿಯ ಮೇಲಿನ ಆಯಾತ ಸುಂಕವನ್ನು ಒಂದು ಔನ್ಸಿಗೆ ೮ ಆಣೆ ಇದ್ದದ್ದನ್ನು ೪ ಆಣೆಗೆ ತಾ. ೧೧ ರಿಂದ ಇಳಿಸಿದ್ದಾರೆ.

ಭಾರತ ಸರಕಾರದ ಶಿಲ್ಪ ಖಾತೆಯ ನಿವೃತ್ತ ಡಾಯರೆಕ್ಟರ ಜನರಲ್ಲರಾದ ರಾ. ಬ. ಎಸ್. ಕೆ. ದೀಕ್ಷಿತರು ತಾ. ೧೩ ಕ್ಕೆ ಪುಣೆಯಲ್ಲಿ ನಿಧನ ಹೊಂದಿದರು.

ಗಿರಣಿಗಳಲ್ಲಿ ದುಡಿಯುವ ವೇಳೆಯು ಎಂಟು ತಾಸಿಗಿಳಿದಿರುವದರಿಂದ ಹಂಗಾಮಿ ಕೆಲಸಗಾರರಿಗಾಗುವ ಹಾನಿಯನ್ನು ತುಂಬಿಕೊಡುವದಕ್ಕಾಗಿ ಅವರ ಕೂಲಿಯ ದರವನ್ನು ೧೦೦ ಕ್ಕೆ ೧೨॥ ಯಿಂದ ಏರಿಸಲಾಗಿದೆ.

# ಹಿಂದುಸ್ತಾನ

## ಮದ್ರಾಸ

ಬ್ರಿಟನು ಭಾರತಕ್ಕೆ ಬೇಗನೆ ಅಧಿಕಾರ ದಾನ ಮಾಡಲಿದೆಂದು ಬ್ರಿಟಿಶ ಕೂಲಿಕಾರ ಪಕ್ಷದ ಕಾರ್ಯದರ್ಶಿ ಕೆರೋಲ ಜಾನ್ಸನರು ಪ್ರೊ. ಎನ್ ಜಿ ರಂಗಾರಿಗೆ ಪತ್ರ ಬರೆದಿದ್ದಾರೆ.

ಒಂದು ಖಟ್ಲೆಯಲ್ಲಿ ಸಾಕ್ಷಿಯಾಗಿರುವ ಮ್ಯಾಜಿಸ್ಟ್ರೇಟನು ಆ ಖಟ್ಲೆಯನ್ನು ತಾನೆ ನಡೆಸಲಾರ. ಆರೋಪಿಯ ಕಬೂಲಿ ಜವಾಬ ಇದ್ದರೂ ಹೀಗೆ ಸಾಕ್ಷಿಯಾಗಿರುವ ಮ್ಯಾಜಿಸ್ಟ್ರೇಟನು ಖಟ್ಲೆ ನಡೆಸುವದು ತೀರ ಅನುಚಿತವೆಂದು ಮದ್ರಾಸ ಹಾಯಕೋರ್ಟಿನವರು ಅಭಿಪ್ರಾಯಪಟ್ಟಿದ್ದಾರೆ.

ಬ್ರಹ್ಮದೇಶದಲ್ಲಿರುವ ಹಿಂದೀ ನಾಗರಿಕರು ಮದ್ರಾಸ ಪ್ರಾಂತಕ್ಕೆ ೧೦೦೦ ಟನ್ನು ಅಕ್ಕಿಯನ್ನು ಉಚಿತವಾಗಿ ಕೊಡಬೇಕೆಂದು ನಿರ್ಧರಿಸಿದ್ದಾರೆ.

ಉತ್ತರ ಮತ್ತು ದಕ್ಷಿಣ ಹಿಂದುಸ್ತಾನಗಳಲ್ಲಿ ಮೀಟರಗೇಜ ರೇಲ್ವೆ ಓಡಾಟವು ಯಾವ ಆತಂಕವಿಲ್ಲದೆ ನಡೆಯುವಂತೆ ಖಾಂಡ್ವಾ (ಜಿ ಆಯ ಪಿ) ಮತ್ತು ಹಿಂಗೋಳಿ (ಎನ್ ಎಸ್) ಸ್ಟೇಶನುಗಳ ನಡುವೆ ಹೊಸದಾಗಿ ಹಳಿ ಹಾಕುವ ವಿಚಾರ ನಡೆದಿರುವದರಿಂದ ಮತ್ತು ಅದು ಪೂರೈಸಲ್ಪಟ್ಟಲ್ಲಿ ಈಗ ಮಿಕ್ಕ ಉಳಿಯಬಹುದಾದ ಮೀಟರಗೇಜ ವಾಗೀನುಗಳು ಅಲ್ಲಿಯೆ ಬೇಕಾಗುವವೆಂದು ರೇಲ್ವೆ ಕಮಿಶನರರಾದ ಎಮರಸನ್ನರು ದಕ್ಷಿಣ ಭಾರತ ವಣಿಕ ಸಂಘಕ್ಕೆ ತಿಳಿಸಿರುವರು.

ನೆಲ್ಲೂರಿನ ಶ್ರೀವೇಣುಗೋಪಾಲಸ್ವಾಮಿ ದೇವಾಲಯದಲ್ಲಿ ಹರಿಜನರ ಪ್ರವೇಶಕ್ಕೆ ಮದ್ರಾಸ ಗವರ್ನರರು ಅಪ್ಪಣೆ ಕೊಟ್ಟಿದ್ದಾರೆ.

ಇದೇ ಅಗಸ್ಟ ೧೫ ರಂದು "ದಲಿತ ವರ್ಗದವರ ಪುಣೆ ಸತ್ಯಾಗ್ರಹ ದಿನ"ವನ್ನಾಚರಿಸಬೇಕೆಂದು ದಲಿತ ವರ್ಗ ಮಹಾಮಂಡಳದ ಅಧ್ಯಕ್ಷರಾದ ದಿ. ಬ. ಶಿವರಾಜರು ಒಂದು ಪ್ರಕಟನೆ ಹೊರಡಿಸಿದ್ದಾರೆ.

೧೯೧೪ ರಲ್ಲಿ ಭಾರತವನ್ನು ಬಿಟ್ಟು ಹೋಗಿದ್ದ ರಾಜಾ ಮಹೇಂದ್ರ ಪ್ರತಾಪರು (೫೯) ಇದೀಗ ಸ್ವದೇಶಕ್ಕೆ ಹಿಂತಿರುಗಿದ್ದಾರೆ. ಇವರು ಯುಕ್ತ ಪ್ರಾಂತದವರು. ತಮ್ಮ ೨೮ ನೇ ವಯಸ್ಸಿನಲ್ಲಿ ಭಾರತದಿಂದ ಹೊರಬಿದ್ದಂದಿನಿಂದ ಇವರು ನಾಲ್ಕು ಸಲ ಭೂಪರ್ಯಟನ ಮಾಡಿದ್ದಾರೆ. ಹಿಂದು ಮುಸ್ಲಿಂ ಐಕ್ಯದಲ್ಲಿ ಇವರಿಗೆ ವಿಶ್ವಾಸವಿದೆ. ಇವರು ಭಾರತದ ರಾಜ್ಯಘಟನೆಯ ಬಗ್ಗೆ ಒಂದು ಯೋಜನೆಯನ್ನು ತಯಾರಿಸಿದ್ದು ಇದನ್ನು ಗಾಂಧೀಜಿ, ನೆಹರು, ಜಿನ್ನಾರವರ ಮುಂದಿಡಲಿದ್ದಾರೆ.

ಮದ್ರಾಸದ ಮುಖ್ಯ ಮಂತ್ರಿಗಳಾದ ಶ್ರೀ ಟಿ. ಪ್ರಕಾಶಂ ಅವರು ವಿಶ್ವವಿದ್ಯಾಲಯದ ಪದವೀದಾನ ಸಮಾರಂಭದಲ್ಲಿ ಭಾಷಣ ಮಾಡುತ್ತ ಸದ್ಯದ ಶಿಕ್ಷಣ ಪದ್ಧತಿಯನ್ನು ಪುನಃ ಪರಿಶೀಲಿಸುವದು ಅಗತ್ಯವಿದೆಂದು ಹೇಳಿದರಲ್ಲದೆ ಶಿಕ್ಷಣ ಕ್ಷೇತ್ರದಲ್ಲಿ ಜಾತೀಯತೆಯ ಭೂತವಿರಬಾರದೆಂದು ಎಚ್ಚರಿಸಿದರು.

ಎಸ್ ಆಯ ಆರ್ ಕೂಲಿಕಾರ ಸಂಘದವರು ಇದೇ ೧೫ ರ ನಂತರ ತಾವು ಸಂಪು ಹೂಡುವದಾಗಿ ಸಾರಿರುವರಷ್ಟೆ. ಈ ಸಂಪನ್ನು ತಡೆಯುವದಾಗಿ ರೇಲ್ವೆಯ ಮ್ಯಾನೇಜರರು ಪರಿಪರಿಯಾಗಿ ಪ್ರಯತ್ನಿಸಿದರು. ಆದರೆ ಯಾವದೂ ಫಲಕಾರಿಯಾಗಲಿಲ್ಲ. ಆದರೆ ಸಂಪನ್ನು ಸಂಘದವರು ಒಂದು ವಾರ ಮುಂದೆ ಹಾಕಿದ್ದಾರೆ.

## ಪಂಜಾಬ

ಅಮೃತಸರ ಬಳಿಯಿರುವ ಶಾತ್ರಾ ಶೇರಸಿಂಗದಲ್ಲಿಯ ೨೦೦೦ ಹರಿಜನರು ಕುಡಿತ ಹಾಗು ಜೂಜಾಟಗಳನ್ನು ಬಿಟ್ಟುಬಿಡಲು ನಿರ್ಧರಿಸಿದ್ದಾರೆ. ಯಾರಾದರೂ ಇದಕ್ಕೆ ತಪ್ಪಿ ನಡೆದರೆ ೫೦ ರೂ. ಗಳ ದಂಡ ವಿಧಿಸಬೇಕೆಂದೂ ಅವನ ಒಂದು ಕಡೆಯ ಮೀಸೆ ಬೋಳಿಸಬೇಕೆಂದೂ ಅವರು ನಿಶ್ಚಯಿಸಿರುವರು.

ಸುಭಾಸ ಸೇನೆಯ ಯೋಧರನ್ನು ಕೆಟ್ಟರೀತಿಯಿಂದ ನಡೆಸಿಕೊಳ್ಳಬಾರದೆಂದು ಪಂಜಾಬ ಸರಕಾರದವರು ಅಧಿಕಾರಿಗಳಿಗೆ ಆಜ್ಞೆ ಹೊರಡಿಸಿದ್ದಾರೆ.

ಲಾಹೋರದಲ್ಲಿ ತಾ. ೮ ಕ್ಕೆ ೧೪೪ ನೇ ಕಲಮನ್ನು ಮುರಿದು ಮೆರವಣಿಗೆ ಹೊರಡಿಸಿದ್ದಕ್ಕಾಗಿ ೪೦ ಜನರನ್ನು ಬಂಧಿಸಲಾಗಿದೆ. ಮೆರವಣಿಗೆಗಳ ಮೇಲಿನ ನಿರ್ಬಂಧವಿನ್ನೂ ಹೋಗಿಲ್ಲ.

## ಮಧ್ಯಪ್ರಾಂತ

ಪಂ. ಜವಾಹರಲಾಲರು ವರ್ಧಾಕ್ಕೆ ಹೊರಟಾಗ ತ್ರಿಪುರಿ ಹತ್ತರ ನರ್ಮದೆಯ ಮಹಾಪೂರದಿಂದ ದಾರಿ ಕಟ್ಟಾದ್ದರಿಂದ ಅವರು ಜಬ್ಬಲಪುರಕ್ಕೆ ಹಿಂತಿರುಗಬೇಕಾಯಿತು. ಅವರು ಅಲ್ಲಿಂದ ನಾಗಪೂರ ಗಾಡಿಯನ್ನು ಹತ್ತಿ ಕಲ್ಮೇಶ್ವರ ನಿಲ್ದಾಣದಲ್ಲಿಳಿದು ಕಾರ್ಯ ಸಮಿತಿ ಸಭೆಗೆ ಸಕಾಲಕ್ಕೆ ತಲುಪಬೇಕೆಂಬ ಅವಸರದಿಂದ ಒಂದು ಕಾರಿನಲ್ಲಿ ಕುಳಿತು ಹೋದರು. ಮಾರ್ಗದಲ್ಲಿ ತಂದೆ, ತಾಯಿ ಮತ್ತು ಮಗ ಹೀಗೆ ಮೂವರು ಹೊರಟಿದ್ದರು. ಪಂ. ನೆಹರೂರ ಕಾರನ್ನು ನೋಡಿ ತಂದೆ-ತಾಯಿಗಳು ಒಂದೊಂದು ಕಡೆಗೆ ಸರಿದರು ಮಗನು ಆಚೆ ಈಚೆ ನೋಡುತ್ತಿದ್ದಾಗ ಪಂ. ನೆಹರೂರ ಕಾರು ಅವನ ಮೇಲೆ ಹಾಯ್ದು ಹೋಯಿತು. ಪಂಡಿತರು ಕೂಡಲೆ ಆ ಶವವನ್ನು ವರ್ಧಾ ಪೋಲೀಸ ಠಾಣೆಗೊಯ್ದು ತಮ್ಮ ಸ್ಥಾನ ಗೌರವವನ್ನು ಲಕ್ಷಿಸದೆ ತಮ್ಮ ಡ್ರಾಯವರಮೇಲೆ ಕ್ರಮಬದ್ಧ ಉಪಾಯಗಳನ್ನು ತೆಗೆದುಕೊಳ್ಳಿರೆಂದು ಪೋಲೀಸರಿಗೆ ಹೇಳಿದರು. ನೆಹರೂ ಅವರ ಕಾರಿಗೆ ಇಂತಹ ದುರ್ಘಟನೆ ಸಂಭವಿಸಿದು ಇದೇ ಮೊದಲನೆಯ ಸಲ.

ಗೋವೆಯು ಎಂದಿಗೂ ಭಾರತದ ಒಂದು ಭಾಗವಾಗಿತ್ತು. ಇನ್ನು ಮುಂದಾದರೂ ಭಾರತದ ಭಾಗವಾಗಿಯೆ ಉಳಿಯುವದೆಂದು ಕಾಂಗ್ರೆಸ ಕಾರ್ಯ ಸಮಿತಿಯು ಗೋವೆಯ ಬಗ್ಗೆ ಒಂದು ಠರಾವನ್ನು ಪಾಸು ಮಾಡಿದೆ.

ಫ್ರೆಡರಿಕ ಚಾಮರ್ಸ ಬೋರ್ನರನ್ನು ಚಕ್ರವರ್ತಿಗಳು ಸರ್ ಪದವಿಗೇರಿಸಿ ಅವರನ್ನು ಮಧ್ಯಪ್ರಾಂತ ವರ್ಹಾಡಗಳ ಗವರ್ನರರನ್ನಾಗಿ ನೇಮಿಸಿದ್ದಾರೆ.

ಅಗಸ್ಟ ಕ್ರಾಂತಿ ದಿನಾಚರಣೆಯ ನಿಮಿತ್ತ ವರ್ಧಾದಲ್ಲಿ ಸೇರಿದ ಸಭೆಯಲ್ಲಿ ಕಾಂಗ್ರೆಸ ಅಧ್ಯಕ್ಷರಾದ ಪಂ. ನೆಹರೂರು ಭಾಷಣ ಮಾಡುತ್ತ ಮುಂದಿನ ವರ್ಷದೊಳಗೆ ಭಾರತವು ಸ್ವಾತಂತ್ರವಾಗುವದೆಂದು ಹೇಳಿದರು.

ವರ್ಧಾದ ಸೆಕ್ಸೇರಿಯಾ ವಾಣಿಜ್ಯ ಕಾಲೇಜದಲ್ಲಿ ಮಾತೃ ಭಾಷೆಯ ಮೂಲಕ ಶಿಕ್ಷಣವನ್ನು ಪ್ರಾರಂಭಿಸಬೇಕೆಂದು ಮಹಾತ್ಮಾ ಗಾಂಧಿಯವರನ್ನು ಉದ್ಘಾಟನೆಗಾಗಿ ಆಮಂತ್ರಿಸಲಾಗಿತ್ತು. ಆದರೆ ಮಹಾತ್ಮರು ಸಭಾಗೃಹಕ್ಕೆ ಹೋಗಿ ಅಲ್ಲಿ ನೆರೆದಿದ್ದ ವಿದ್ಯಾರ್ಥಿಗಳ ಕೀಸರುಬಾಸರು ಸಹಿಸದೆ ತಮ್ಮ ಭಾಷಣವನ್ನು ಮಾಡದೆ ಹಾಗೇ ಹಿಂತಿರುಗಿದರು. ಸಂಜೆಗೆ ಅವರು ಅದೇ ಕಾಲೇಜದ ಬಯಲಿನಲ್ಲಿ ಸಾಯಂಕಾಲ ವಿದ್ಯಾರ್ಥಿಗಳಿಗಾಗಿ ಭಾಷಣ ಮಾಡಲು ಒಪ್ಪಿದರು.

ಜಗತ್ತಿನ ದೊಡ್ಡ ರಾಷ್ಟ್ರಗಳೆಲ್ಲ ಜಾಗತಿಕ ಮಹಾಮಂಡಳ ಸ್ಥಾಪಿಸುವ ವಿಚಾರ ನಡೆಸಿರ್ವವಾಗ ಮುಸ್ಲಿಂ ಲೀಗಿನ ಮುಖಂಡರು ಪಾಕಿಸ್ತಾನದ ಬಗ್ಗೆ ಅಗ್ರಹ ಹಿಡಿದಿದ್ದಾರೆ. ಭಾರತದ ವಿಭಜನೆಯಿಂದ ಹಿಂದು-ಮುಸ್ಲಿಂ ಸಮಸ್ಯೆ ಬಗೆಹರಿಯದೆಂದು ಕಾಂಗ್ರೆಸ ಕಾರ್ಯ ಸಮಿತಿ ಸದಸ್ಯರಾದ ಡಾ. ಫಕರುದ್ದೀನರು ಒಂದು ಭಾಷಣದಲ್ಲಿ ಹೇಳಿದರು.

ಸಂಸ್ಥಾನಗಳಲ್ಲಿ ಕಾಂಗ್ರೆಸ ಸಮಿತಿಗಳನ್ನು ಪ್ರಾರಂಭಿಸುವದಕ್ಕಿಂತ ಪ್ರಜಾ ಮಂಡಳಗಳನ್ನು ಸ್ಥಾಪಿಸಲು ಉತ್ತೇಜನ ಕೊಡಬೇಕೆಂದು ಕಾಂಗ್ರೆಸ ಕಾರ್ಯ ಸಮಿತಿಯು ಠರಾವು ಪಾಸು ಮಾಡಿದೆ.

ಕಾಂಗ್ರೆಸ ಕಾರ್ಯ ಸಮಿತಿಯ ಸದಸ್ಯರಾದ ಶ್ರೀ ರಾವಸಾಹೇಬ ಪಟವರ್ಧನರು ವರ್ಧಾದಲ್ಲಿ ಭಾಷಣ ಮಾಡುತ್ತ ಲೀಗಿನ ಬೆದರಿಕೆಗೆ ಕಾಂಗ್ರೆಸ್ಸು ಸೊಪ್ಪು ಹಾಕುವದಿಲ್ಲವೆಂದಿದ್ದಾರೆ.

ದಕ್ಷಿಣ ಅಫ್ರಿಕೆಯ ಘೆಟ್ಟೋ ಕಾಯಿದೆಯನ್ನು ನಿಷೇಧಿಸುವದಕ್ಕಾಗಿ ಲಾಹೋರಿನಲ್ಲಿ ಕೌಮಿ ಖಿದಮತಗಾರರು ತಾ. ೧೦ ಕ್ಕೆ ಜ. ಸ್ಮಟ್ಸರ ಗೊಂಬೆಯ ಮೆರವಣಿಗೆ ಹೊರಡಿಸಿ ನಂತರ ಅದನ್ನು ಹೋಳಿ ಮಾಡಿದರು.

## ದಿಲ್ಲಿ

ವೈಸರಾಯರ ಅಧ್ಯಕ್ಷತೆಯಲ್ಲಿ ಹೊಸದಿಲ್ಲಿಯಲ್ಲಿ ತಾ ೮ ಕ್ಕೆ ಗವರ್ನರರ ಪರಿಷತ್ತು ಕೂಡಿತ್ತು. ಸಿಂಧ, ಪಂಜಾಬ, ಗಡಿನಾಡ ಮತ್ತು ಯುಕ್ತ ಪ್ರಾಂತ ಗವರ್ನರುಗಳು ಹಾಜರಿದ್ದರು.

ಕೇಂದ್ರ ಸರಕಾರದವರು ಒಂದು ಪ್ರಕಟನೆ ಹೊರಡಿಸಿ ಅಖಿಲ ಭಾರತ ಫಾರ್ವರ್ಡಬ್ಲಾಕ ಮೇಲಿದ್ದ ನಿರ್ಬಂಧವನ್ನು ರದ್ದುಗೊಳಿಸಿದ್ದಾರೆ. ೧೯೪೨ರಲ್ಲಿ ಈ ಸಂಸ್ಥೆಯ ಮೇಲೆ ಭಾರತ ಸಂರಕ್ಷಣ ಕಾಯದೆಯನ್ವಯ ನಿರ್ಬಂಧ ಹೇರಲಾಗಿತ್ತು.

ಈಗ ಕೊಡಲಾಗುತ್ತಿರುವ ೧೨ ಔಂಸಿನ ಸೀದಾ ಪ್ರಮಾಣವು ಬಹಳ ಕಡಿಮೆಯಿದೆ. ಈ ಪ್ರಮಾಣವನ್ನು ಇನ್ನೂ ತಗ್ಗಿಸಿದರೆ ಜನತೆಯ ಆರೋಗ್ಯದ ಮೇಲೆ ಅನಿಷ್ಟ ಪರಿಣಾಮವುಂಟಾಗುವದು. ಮೇಲಾಗಿ ಹೀಗೆ ಮಾಡುವದರಿಂದ ಸರಕಾರದಲ್ಲಿ ಜನತೆಯ ವಿಶ್ವಾಸ ಅಳಿದು ಹೋಗಿ ದೇಶದಲ್ಲಿ ಅರಾಜಕತೆ ಹಾಗು ಅಶಾಂತತೆ ನೆಲೆದೋರುವ ಸಂಭವವಿದೆಯೆಂಬ ಗೊತ್ತುವಳಿಯು ಅಖಿಲ ಭಾರತ ಆಹಾರ ಮಂತ್ರಿಗಳ ಪರಿಷತ್ತಿನಲ್ಲಿ ಪಾಸಾಯಿತು. ವಿದೇಶದಿಂದ ಅಹಾರ ದೊರಕಿಸುವ ಬಗ್ಗೆ ಇಮ್ಮಡಿ ಪ್ರಯತ್ನ ಮಾಡಬೇಕೆಂದೂ ಕೇಂದ್ರ ಸರಕಾರಕ್ಕೆ ಸೂಚಿಸಿತು.

ಅಗಸ್ಟ ಕ್ರಾಂತಿ ದಿನಾಚರಣೆಯ ನಿಮಿತ್ತ ದಿಲ್ಲಿಯಲ್ಲಿ ವಿದ್ಯಾರ್ಥಿಗಳು ಮೆರವಣಿಗೆ ಹೊರಡಿಸಿದಾಗ ಪೋಲೀಸರು ಅಶ್ರುವಾಯು ಮತ್ತು ಲಾಠಿ ಪ್ರಹಾರದಿಂದ ಮೆರವಣಿಗೆಯನ್ನು ಚದುರಿಸಿದರು. ಯಾರಿಗೂ ಅಪಾಯವಾಗಿಲ್ಲ. ೧೨ ವಿದ್ಯಾರ್ಥಿಗಳಿಗೆ ಚಿಕ್ಕಪುಟ್ಟ ಗಾಯಗಳಾಗಿವೆ.

ಕೋಪನಹೇಗನ (ಡೆನ್ಮಾರ್ಕ) ಸೇರಿದ ಅಂತರರಾಷ್ಟ್ರೀಯ ಆಹಾರ ಮತ್ತು ಒಕ್ಕಲುತನದ ಪರಿಷತ್ತಿಗೆ ಹಿಂದೀ ಪ್ರತಿನಿಧಿಗಳಲ್ಲೊಬ್ಬರಾಗಿ ಹೋಗಿದ್ದ ಡಾ. ವಿಜಯೀಂದ್ರರಾಯರು ಆ ಪರಿಷತ್ತಿನ ಸ್ಥಾಯಿ ಅರ್ಥ ಶಾಸ್ತ್ರ ಸಮಿತಿಯ ಸದಸ್ಯರಾಗಿ ಆರಿಸಲ್ಪಟ್ಟಿದ್ದಾರೆ. ಈ ಸಮಿತಿಯ ಸಭೆ ತಾ॥ ೧೯ಕ್ಕೆ ಸೇರಲಿದ್ದು ಡಾ. ರಾಯರು ಅದಕ್ಕಾಗಿ ತೀವ್ರವೇ ಅಮೇರಿಕೆಗೆ ತೆರಳಲಿರುವರು.

ಭಾರತ ಸರಕಾರವು ಈ ವರ್ಷದಲ್ಲಿ ರೇಲ್ವೆ, ಅಂಚೆ ಮತ್ತು ತಂತಿ ಖಾತೆಗಳನ್ನು ಬಿಟ್ಟು ಉಳಿದ ನಾಗರಿಕ ಕೇಂದ್ರ ಖಾತೆಗಳಲ್ಲಿಯ ಕಡಿಮೆ ಸಂಬಳದ ನೌಕರರಿಗೆ ೩॥ ಕೋಟಿ ರೂ ಗಳ ಪರಿಹಾರವನ್ನು ಕೊಡಲು ನಿರ್ಧರಿಸಿದೆ.

## ಬಂಗಾಲ---ಆಸಾಮ

ಬಂಗಾಲದಲ್ಲಿ ಕಾಲಿಡಬಾರದೆಂದು ಹಿಂದುಸ್ತಾನ ಕ್ರಾಂತಿಕಾರಕ ಸೋಶಲಿಸ್ಟ್ ಪಕ್ಷದ ಕಾರ್ಯದರ್ಶಿಗಳಾದ ಶ್ರೀ ಜೋಗೇಶ ಚಟರ್ಜಿಯವರ ಮೇಲೆ ಹಾಕಿದ ನಿರ್ಬಂಧವನ್ನು ಹಿಂತೆಗೆದುಕೊಳ್ಳಲು ತಾವು ಸಿದ್ಧವಿಲ್ಲೆಂದು ಬಂಗಾಲ ಸರಕಾರವು ತಿಳಿಸಿದೆ.

ಬಂಗಾಲ ಆಸಾಮುಗಳಲ್ಲಿ ಅಂಚೆ ಸಂಪಿನಲ್ಲಿ ಭಾಗವಹಿಸಿದ ಅಂಚೆ---ತಂತಿ ಯೂನಿಯನುಗಳಿಗೆ ಕೊಡಲಾಗಿದ್ದ ಮನ್ನಣೆಯನ್ನು ಕೇಂದ್ರ ಸರಕಾರ ಹಿಂತೆಗೆದುಕೊಂಡಿದೆ ಆ ಮನ್ನಣೆ ತಿರುಗಿ ಸಿಗದಿದ್ದರೆ ಅಂಚೆ ಜನರು ಮತ್ತೊಮ್ಮೆ ಸಂಪು ಹೂಡುವರೆಂದು ಯುಕ್ತ ಕ್ರಿಯಾ ಸಮಿತಿ ಅಧ್ಯಕ್ಷರಾದ ಶ್ರೀಮೃಣಾಲ ಕಾಂತಿ ಬೋಸರು ಕೇಂದ್ರಸರಕಾರದವರಿಗೆ ತಂತಿ ಕಳಿಸಿರುವರು.

ಕಲಕತ್ತೆಗೆ ಏಳು ಮೈಲು ದೂರದಲ್ಲಿ ಒಂದು ರೇಲ್ವೆ ಸ್ಟೇಶನ್ನದ ಬಳಿ ಒಂದು ಗೂಡ್ಸ ಗಾಡಿಯು ಇನ್ನೊಂದಕ್ಕೆ ಡಿಕ್ಕಿ ಹೊಡೆದಿದ್ದರಿಂದ ಇಬ್ಬರು ಗಾರ್ಡರು ಸತ್ತರು.

ಬಂಗಾಲ ಭಾಗದ ಇಂಪೀರಿಯಲ ಬ್ಯಾಂಕಿನ ಹಿಂದೀ ಕೆಲಸಗಾರರು ತಾ ೨ರಿಂದ ಸಂಪು ಪ್ರಾರಂಭಿಸಿದ್ದು ಇನ್ನೂ ಅದನ್ನು ನಿಲ್ಲಿಸಿಲ್ಲ. ಮೂಲ ಸಂಬಳವದ್ದು ನೂರಕ್ಕೆ ೪೦ ರಂತೆ ಏರಿಸಬೇಕು. ಮತ್ತು ಇನ್ನುಳಿದ ವಿಷಯಗಳನ್ನು ಮಧ್ಯಸ್ಥಿಗೆ ಒಪ್ಪಿಸಬೇಕೆಂದು ಅವರ ಕೇಳಿಕೆಯಿದೆ.

## ಬಿಹಾರ

ಬಿಹಾರ ಸರಕಾರದವರು ಗ್ರಾಮಗಳ ಆರೋಗ್ಯ ರಕ್ಷಣೆಗಾಗಿ ೧೨ ಲಕ್ಷ ರೂ ಗಳನ್ನು ಮಂಜೂರ ಮಾಡಿದ್ದಾರೆ.

## ಮಾರಾಟ ಕರ ಅನ್ಯಾಯದ್ದಲ್ಲ
### ಮುಂಬಯಿ ಅರ್ಥಸಚಿವರ ವಿವರಣೆ

ಮುಂಬಯಿ ಪ್ರಾಂತದ ಅರ್ಥಸಚಿವರಾದ ಶ್ರೀ ವೈಕುಂಠಲಾಲ ಮೇಥಾ ಅವರು ಮಾರಾಟ ಕರದ ಅನೇಕ ಟೀಕೆಗಳಿಗೆ ಸುದ್ದಿಗಾರರ ಸಭೆಯಲ್ಲಿ ಉತ್ತರ ಕೊಟ್ಟಿದ್ದಾರೆ.

ಈ ಕರದ ಜನಕರು ಗವ್ಹರನರರ ಸಲಹೆಗಾರರೆಂಬುದು ನಿಜ. ಆದರೆ ಮಾರಾಟಕರ ಹೊಸದಲ್ಲ. ಜಗತ್ತಿನ ಎಲ್ಲ ದೇಶಗಳಲ್ಲಿಯೂ ಇದೆ. ಅದೇಕೆ ಹಿಂದುಸ್ತಾನದ ಕೆಲವು ಪ್ರಾಂತಗಳಲ್ಲಿದೆ ಅಲ್ಲಲ್ಲಿಯ ಅನುಭವಗಳನ್ನು ತಿಳಿದುಕೊಂಡು ಅದರಿಂದ ಲಾಭ ಪಡೆಯಬೇಕೆಂದು ಮಾತ್ರ ಇದರ ಜನಕರು ಯೋಚಿಸಿರುವರೆಂದು ಮಂತ್ರಿವರ್ಯರು ನುಡಿದರು. ಇದನ್ನು ಅವಸರದಿಂದ ಅಮಲಿನಲ್ಲಿ ತರಲಾಗುತ್ತಿದೆಂಬ ಆರೋಪವನ್ನು ಮಂತ್ರಿಗಳು ನಿರಾಕರಿಸಿ, ವಿಚಾರವಿನಿಮಯಕ್ಕಾಗಿ ಜನತೆಗೆ ಸಾಕಷ್ಟು ಅವಧಿ ಕೊಡಬೇಕೆಂಬ ಉದ್ದೇಶದಿಂದ ಈ ಕರ ಜಾರಿ ಮಾಡುವದನ್ನು ಜುಲೈ ೧ ರಿಂದ ಅಕ್ಟೋಬರ ೧ ಕ್ಕೆ ಸದ್ಯದ ಸರಕಾರದವರು ಮುಂದರಿಸಿರುವರೆಂದು ತಿಳಿಸಿದರು.

ಕರವನ್ನು ಪ್ರಥಮ ಮಾರಾಟದಲ್ಲಿಯೇ ಹೇರಬೇಕೋ, ವ್ಯಾಪಾರಸ್ಥರಿಂದ ಲೈಸೆನ್ಸ ಫೀ ವಸೂಲ ಮಾಡಬೇಕೋ, ಮದ್ರಾಸದಂತೆ ಪ್ರತಿ ಮಾರಾಟದಲ್ಲಿ ವಸೂಲ ಮಾಡಬೇಕೋ, ಮುಂತಾದ ಪದ್ಧತಿಗಳನ್ನು ಮುಂಬಯಿ ಸರಕಾರದವರು ಪೂರ್ಣ ವಿಚಾರ ಮಾಡಿ ಕೊನೆಯ ಮಾರಾಟದಲ್ಲಿ ಮಾತ್ರ ಹೇರಬೇಕೆಂಬ ನಿರ್ಣಯಕ್ಕೆ ಬಂದಿದ್ದಾರೆ.

ನಿರ್ಯಾತ ವ್ಯಾಪಾರವನ್ನು ಕಾಪಾಡಿಕೊಳ್ಳುವದಕ್ಕೆ ಅದರ ಮೇಲೆ ಕರ ಹೇರಲಾಗಿಲ್ಲ.

ಪ್ರಾಂತದಲ್ಲಿ ಅನೇಕಾನೇಕ ವಿಧಾಯಕ ಕಾರ್ಯಗಳನ್ನು ಕೈಕೊಳ್ಳಲು ನಿರ್ಧರಿಸಿದೆ. ಇವುಗಳ ಸಲುವಾಗಿ ಶಾಸನ ಸಭೆಯ ನೊನ್ನಿನ ಅಧಿವೇಶನದಲ್ಲಿ ಐದುವರೆ ಕೋಟಿ ರೂಪಾಯಿಗಳ ಪೂರಕ ಬೇಡಿಕೆ ಮುಂದಿಸಲಾಗಿತ್ತು. ಮಾರಾಟ ಕರದಿಂದ ಎರಡುವರೆ ಕೋಟಿ ರೂಪಾಯಿ ದೊರೆಯಬಹುದು. ಅಲ್ಲದೆ ಕೆಲವು ಪದಾರ್ಥಗಳನ್ನು ಹೊಸದಾಗಿ ಈ ಕರಾಕರಣೆಯಿಂದ ಹೊರ್ತು ಪಡಿಸಿದ್ದರಿಂದ ಉತ್ಪನ್ನವು ಇನ್ನೂ ಇಳಿಯಬಹುದಾಗಿದೆ. ಹೀಗಿರುವಾಗ ಮತ್ತು ನಮ್ಮ ವೆಚ್ಚದ ದೃಷ್ಟಿಯಿಂದ ಈ ಕರವು ಅನ್ಯಾಯವೆಂದು ಹೇಳುವರಾರು? ಶಿಕ್ಷಣ ವೆಚ್ಚಕ್ಕೆ ಹೆಚ್ಚಾಗಿ ಕೊಟ್ಟ ೮೦ ಲಕ್ಷ ರೂ. ಬರಗಾಲ ನಿವಾರಣೆಗೆ ತೆಗೆದಿಟ್ಟ ಒಂದೂವರೆ ಕೋಟಿ ರೂ. ದುರ್ಭಿಕ್ಷ ಪ್ರದೇಶಗಳಲ್ಲಿ ಪುಕ್ಕಟೆ ಹಾಲು ಹಂಚುವದಕ್ಕೆ ತೆಗೆದಿಟ್ಟ ಹಣ ಇಷ್ಟು ವೆಚ್ಚಗಳನ್ನು ಗಮನಕ್ಕೆ ತಂದುಕೊಂಡರೆ ಸಾಕು, ಈ ಕರವು ನ್ಯಾಯವಿದೆಯೆಂದು ಯಾರಾದರೂ ಹೇಳಬಹುದು.

ಅಭಿವೃದ್ಧಿ ನಿಧಿ, ಸಾಲ ಪರಿಹಾರ ನಿಧಿ, ಯುದ್ಧೋತ್ತರ ಪುನರ್ರಚನಾ ನಿಧಿ ಮೊದಲಾದವುಗಳಿಂದ ಹಣ ತೆಗೆದುಕೊಳ್ಳಬಹುದೆಂದು ವಾದಿಸಬಹುದು. ಆದರೆ ಸರಕಾರದ ವೆಚ್ಚವು ಅಪರಿಮಿತವಾಗಿರುವದರಿಂದ ಆವರ್ತ ಉತ್ಪನ್ನ ಸಹ ಅವಶ್ಯವಿದೆ.

ನಾವು ಅಧಿಕಾರಕ್ಕೆ ಬಂದಾಗ ಮಾರಾಟಕರ ಕಾಯಿದೆಯು ಆಗಲೇ ಅಸ್ತಿತ್ವಕ್ಕೆ ಬಂದಿತ್ತು ಪ್ರಾಂತಕ್ಕೆ ಅಧಿಕ ಉತ್ಪನ್ನ ಅವಶ್ಯವಿದ್ದದರಿಂದ ನಾವು ಆ ಕಾಯದೆಯನ್ನು ರದ್ದುಗೊಳಿಸಲಿಲ್ಲ.

ಇದಕ್ಕೂ ಹೆಚ್ಚಿನ ಕರ ಹೇರಲಿಕ್ಕಿಲ್ಲೆಂದು ಸಹ ನಾನು ಆಶ್ವಾಸನ ಕೊಡಲಾರೆ. ಪ್ರಾಂತದ ಅಭಿವೃದ್ಧಿಗಾಗಿ ಪ್ರಯತ್ನಿಸುವದು ಲೋಕನಿಯುಕ್ತ ಮಂತ್ರಿಮಂಡಲದ ಪ್ರಥಮ ಹೊಣೆಯಾಗಿದೆ. ಆದುದರಿಂದ ಅವರು ಉತ್ಪನ್ನದ ಹೊಸ ಹೊಸ ಮಾರ್ಗಗಳನ್ನು ಶೋಧಿಸಬೇಕಾಗುವದಲ್ಲದೆ ಇಳಿಸುವದು ಶಕ್ಯವಿಲ್ಲ. ಆದರೆ ಬಡವರ ಮೇಲಿನ ಭಾರವನ್ನುಮಾತ್ರ ಹೆಚ್ಚಿಸುವದಿಲ್ಲ. ಮಾರಾಟ ಕರ ಹೇರುವಾಗ ಈ ಮಾತನ್ನು ನಾವು ಲಕ್ಷದಲ್ಲಿಟ್ಟುಕೊಂಡಿರುವೆವು.

ಅಲ್ಲದೆ ಕಾಯಿದೆಯ ಮೊದಲಿನ ನಿಯಮುಗಳಲ್ಲಿ ಹಲವಾರು ತಿದ್ದುಪಡಿಗಳನ್ನು ಮಾಡಿ ವ್ಯಾಪಾರಸ್ಥರಿಗೆ ಒದಗಬಹುದಾಗಿದ್ದ ಕಷ್ಟಗಳನ್ನು ತಗ್ಗಿಸಲಾಗಿದೆ. ಒಟ್ಟಿನಲ್ಲಿ ಕಾಯಿದೆಯನ್ನು ಸಕಲರಿಗೂ ಒಪ್ಪಿಗೆಯಾಗುವಂತೆ ಮಾರ್ಪಡಿಸಿದ್ದರೂ ಅದನ್ನು ಕಾಯಿದೆ ಮಂಡಲದ ಮುಂದೆ ತಂದು ಅದರ ಒಪ್ಪಿಗೆ ಪಡೆಯುವದಿಲ್ಲೆಂದು ಯಾರೂ ತಿಳಿದುಕೊಳ್ಳಲಾಗದು. ಆದನ್ನು ಪುನಃ ಪಾಸು ಮಾಡಿಕೊಳ್ಳುವ ಪ್ರಸಂಗ ಬಂದಾಗ, ಕಾಯಿದೆ ಮಂಡಲದಲ್ಲಿ ಆದನ್ನು ಮಂಡಿಸುತ್ತೇವೆ. ಆ ಪ್ರಸಂಗ ಒಂದು ವರ್ಷದಲ್ಲಿಯೇ ಬರುವದು.

ಮಾರಾಟ ಕರ ಹೇರುವ ಬಗ್ಗೆ ಈಗ ನಿರ್ಧರಿಸಿದ ೧೦೦೦೦ ರೂ. ವ್ಯವಹಾರದ ಕನಿಷ್ಠ ಮಿತಿಯನ್ನು ೨೦೦೦೦ ರೂ ಅಥವಾ ಅದಕ್ಕೂ ಹೆಚ್ಚಿನ ಅಂಕಿಗೆ ಏರಿಸಬೇಕೆಂದು ಕೇಳಿದ್ದಕ್ಕೆ ಮಂತ್ರಿಗಳು ಉತ್ತರಿಸುತ್ತ, ಅದಕ್ಕೆ ತಿದ್ದುಪಡಿ ಮಸೂದೆ ಅವಶ್ಯಕವಾಗುವದು. ಆದು ಸದ್ಯಕ್ಕೆ ಸಾಧ್ಯವಿಲ್ಲವೆಂದರು.

ಕರ ಜಾರಿಗೆ ತರುವ ದಿನವನ್ನು ಮತ್ತೆ ಮುಂದೆ ಹಾಕಲಾಗುವದಿಲ್ಲ. ಯಾಕೆಂದರೆ ಮೂರು ತಿಂಗಳಿಗೆ ೪೦ ಲಕ್ಷ ರೂ. ಉತ್ಪನ್ನ ಬರುವದೆಂದು ಅಂದಾಜಿದ್ದು ಅದನ್ನು ಕಳೆದುಕೊಳ್ಳಬೇಕಾಗುತ್ತದೆಂದು ಅವರು ಕೊನೆಯಲ್ಲಿ ತಿಳಿಸಿದರು.

## ಕೂಲಿಕಾರ ಹೋರಾಟಕ್ಕೆ ಕಾಂಗ್ರೆಸ ಬೆಂಬಲ
### ಆದರೆ ಅನುಚಿತ ಸಂಪುಗಳ ನಿಷೇಧ

ಕಾಂಗ್ರೆಸ ಕಾರ್ಯಸಮಿತಿಯವರು ಒಂದು ದೀರ್ಘ ಪ್ರಕಟಣೆ ಹೊರಡಿಸಿ, ಕೂಲಿಕಾರ ಸಮಸ್ಯೆ ಬಗ್ಗೆ ತಮ್ಮ ಅಭಿಪ್ರಾಯ ವ್ಯಕ್ತ ಮಾಡಿದ್ದಲ್ಲದೆ, ತಮ್ಮ ಆರ್ಥಿಕ ಪರಿಸ್ಥಿತಿಯ ಸುಧಾರಣೆಗಾಗಿ ಕೆಲಸಗಾರರು ನಡೆಸಿದ ಹೋರಾಟಕ್ಕೆ ಸಹಾನುಭೂತಿ ತೋರಿಸಿ ನ್ಯಾಯವಾದ ಬೇಡಿಕೆಗಳನ್ನು ಸರಕಾರದವರು ಮತ್ತು ಒಡೆಯರು ಪೂರೈಸಬೇಕೆಂದು ಸೂಚಿಸಿದ್ದಾರೆ.

ಅವರ ಪ್ರಕಟಣೆ ಇಂತಿದೆ:—

ಇತ್ತೀಚೆಗೆ ಕೂಲಿಕಾರರಲ್ಲಿ ಅಸಂತೋಷ ಹಬ್ಬಿ, ಅನೇಕ ಸಂಪುಗಳಾಗಿ ಕೆಲಸಗಾರರಿಗೂ ಜನತೆಗೂ ಹಾನಿಯುಂಟಾದುದರಿಂದ ಕಾಂಗ್ರೆಸ ಕಾರ್ಯಸಮಿತಿಗೆ ವಿವಂಚನೆಯಾಗಿದೆ. ಕೂಲಿಕಾರ ವರ್ಗದಲ್ಲುಂಟಾದ ಉತ್ಪಾತವು ಯುದ್ಧಜನ್ಯ ಆರ್ಥಿಕ ದುರ್ದೆಸೆಯ ಮೂಲಕವಾದುದೆಂದು ಸಮಿತಿಗೆ ಗೊತ್ತಿದೆ. ಏರಿದ ಜೀವನ ವೆಚ್ಚ ಇನ್ನೂ ಇಳಿದಿಲ್ಲ. ಅಲ್ಲದೆ ಕೂಲಿಕಾರರ ಬೇಡಿಕೆಗಳ ವಿಚಾರಣೆಗೆ ಸಾಧನವಿಲ್ಲದ್ದರಿಂದ ಮತ್ತು ತೊಡಕುಗಳನ್ನು ಮಧ್ಯಸ್ಥಿಗೆ ಒಪ್ಪಿಸುವದಕ್ಕೆ ವಿಲಂಬ ಮಾಡುವದರಿಂದ ಕೂಲಿಕಾರರ ಕಷ್ಟನಷ್ಟಗಳು ಅಪರಿಮಿತವಾಗಿರುವವು.

ಕೂಲಿಕಾರರು ತಮ್ಮ ಆರ್ಥಿಕ ಉನ್ನತಿಗೆ ನಡೆಸಿದ ಹೋರಾಟದಲ್ಲಿ ಕಾಂಗ್ರೆಸಿಗಿದ್ದ ಸಹಾನುಭೂತಿ ಜಗತ್ಪ್ರಸಿದ್ಧವಿದ್ದು ಅದನ್ನು ಪುನರುಚ್ಚರಿಸುವ ಅವಶ್ಯಕತೆ ಇಲ್ಲ. ಕೂಲಿಕಾರರ ಬೇಡಿಕೆ ಮತ್ತು ತಕರಾರುಗಳನ್ನು ನಿಷ್ಪಕ್ಷಪಾತದಿಂದ ವಿಚಾರಿಸುವದಕ್ಕೆ ವ್ಯವಸ್ಥೆ ಮಾಡಿ ಸರಕಾರದವರೂ ಒಡೆಯರೂ ಕೂಲಿಕಾರರ ಅಸಂತೋಷವನ್ನು ನಿವಾರಿಸಬೇಕೆಂದು ಸಮಿತಿಯು ಒತ್ತಿ ಹೇಳುತ್ತದೆ.

ರಾಷ್ಟ್ರಕ್ಕೆ ಅನೇಕ ನಿತ್ಯೋಪಯೋಗಿ ವಸ್ತುಗಳ ಪೂರೈಕೆ ಅವಶ್ಯವಿರುವದರಿಂದ, ಪರಸ್ಪರ ವಿಚಾರವಿನಿಮಯದಿಂದ ತಪ್ಪಿಸಬಹುದಾದ ಸಂಪುಗಳಿಗೆ ಜನತೆಯ ಬೆಂಬಲ ದೊರಕುವದಿಲ್ಲೆಂದು ಇಲ್ಲಿ ಒಡೆದು ಹೇಳುವದು ಅವಶ್ಯವಿದೆ. ಸಂಧಾನದ ವಿಚಾರ ಮಾಡದೆ, ಕೆಲಸಗಾರರು ಅವಸರದಿಂದ ಸಂಪುಪ್ರಾರಂಭಿಸಿ ತಮಗೂ ಜನತೆಗೂ ಅಹಿತ ಬಗೆದಿರುವರು. ಅದುದರಿಂದ ಜನಜೀವನಕ್ಕೆ ಮತ್ತು ಸರಕಾರಿ ಆಡಳಿತಕ್ಕೆ ಅವಶ್ಯವಿರುವ ಉದ್ಯೋಗಗಳು ಮತ್ತು ಅವುಗಳ ನೌಕರರು ಸಂಪಿನ ಬಾಧೆಯಿಂದ ಅಲಿಪ್ತವಿರಬೇಕೆಂದೂ ಅವರ ತಕರಾರುಗಳು ಪರಸ್ಪರ ವಿಚಾರವಿನಿಮಯ ಮತ್ತು ಮಧ್ಯಸ್ತಿಯಿಂದ ಬಗೆಹರಿಸಲ್ಪಡಬೇಕೆಂದೂ ಸಮಿತಿಯ ಅಭಿಪ್ರಾಯವಿರುವದು.

ಕೆಲಸಗಾರರು ತಮ್ಮ ಮೇಲಿನ ಹೊಣೆಯನ್ನು ಮರೆತು, ಶಿಸ್ತುಗೆಟ್ಟು ವರ್ತಿಸಿದುದು ಇತ್ತೀಚಿಗಿನ ಕೆಲವು ಸಂಪುಗಳಲ್ಲಿ ಕಂಡುಬಂದುದರಿಂದ ಸಮಿತಿಗೆ ಖೇದವಾಗಿದೆ. ಶಿಸ್ತು ಮತ್ತು ಇತರರ ಬೇಡಿಕೆಗಳಿಗೆ ಮನ್ನಣೆ, ಇವು ಕೂಲಿಕಾರ ಚಳವಳಿಯ ಭದ್ರ ಅಡಿಗಲ್ಲೆಂಬದನ್ನು ಅವರು ಅರಿಯಬೇಕು. ಕೂಲಿಕಾರ ಸಂಪುಗಳಲ್ಲಿ ತಲೆದೋರಿರುವ ಕೆಲವು ಅನಪೇಕ್ಷಿತ ಪ್ರಸಂಗಗಳು ಹಲ ಕೆಲವು ವ್ಯಕ್ತಿಗಳ ಮತ್ತು ವರ್ಗಗಳ ಸ್ವಾರ್ಥ ಸಾಧನೆಯ ಫಲವೆಂದು ನಮಗೆ ತಿಳಿದು ಬಂದಿದೆ. ಅವರು ತಮ್ಮ ರಾಜಕೀಯ ಅಥವಾ ಬೇರೆ ಉದ್ದೇಶಗಳ ಪೂರೈಕೆಗಾಗಿ ಕೂಲಿಕಾರರ ಅಜ್ಞಾನದ ಲಾಭ ಪಡೆಯುತಿರುವದರಿಂದ ಕಾಂಗ್ರೆಸು ಕೂಲಿಕಾರರ ಸಂಪರ್ಕ ಬೆಳಿಸಿ ಅವರ ಸೇವೆಗೈಯುವ ಮತ್ತು ಅವರಿಗೆ ಯಾವಾಗ ಬೆಂಬಲಕೊಡಬೇಕು, ಇಲ್ಲವೆ ನಿಯಂತ್ರಿಸಬೇಕು ಎಂಬದನ್ನು ನಿರ್ಣಯಿಸುವ ಕಾಲವೀಗ ಬಂದಿದೆ.

ಕೂಲಿಕಾರರ ತಂಟೆಗಳನ್ನು ಬಗೆಹರಿಸಲು ಮೇಲಿನ ಸೂಚನೆಗಳು ಅವಶ್ಯವಿದ್ದರೂ, ರಾಷ್ಟ್ರದಲ್ಲಿ ಇನ್ನೂ ರೂಢವಾಗಿರುವ ಆಕಿಶ್ರಸರಣವು ಆರ್ಥಿಕ ಪರಿಸ್ಥಿತಿಯನ್ನು ಹದಗೆಡಿಸಿ ಸುದಿನಗಳು ಬರದಂತೆ ಮಾಡಿದೆ ಮತ್ತು ಕೂಲಿ ಹಾಗೂ ಬೆಲೆಗಳ ನಡುವೆ ದುಷ್ಟ ಸ್ಪರ್ಧೆಯನ್ನುಂಟುಮಾಡಿ ಬಡವರ ಕಷ್ಟವನ್ನು ಹೆಚ್ಚಿಸುತಿದೆ. ಭಾವೀ ಬೆಲೆ ಮಟ್ಟದ ನಿರ್ಣಯವಾದ ಹೊರ್ತು ಮತ್ತು ಆರ್ಥಿಕ ಸಂಬಂಧದಲ್ಲಿ ಸುವ್ಯವಸ್ಥೆ ಉಂಟಾದ ಹೊರ್ತು ಈ ಪರಿಸ್ಥಿತಿ ಸುಧಾರಿಸಲಾರದು. ಈ ಸಮಸ್ಯೆಯನ್ನು ಕೇಂದ್ರ ಸರಕಾರವು ಬಿಡಿಸಬಹುದಾದರೂ ಪ್ರಾಂತಿಕ ಸರಕಾರಗಳು ತಮ್ಮ ಅಧಿಕಾರದಲ್ಲಿ ಶಕ್ಯವಾದ ಪ್ರಯತ್ನ ಮಾಡಬೇಕೆಂದು ಈ ಸಮಿತಿಯು ಸೂಚಿಸುತ್ತದೆ.

## ಕಾಂಗ್ರೆಸ್ಸಿಗೆ ಅಧಿಕಾರ ಒಪ್ಪಿಸಿರಿ
### ಬ್ರೈಲ್ಸಫೋರ್ಡರ ಸೂಚನೆ

"ಕಾಂಗ್ರೆಸ್ಸಿಗೆ ಹೊಣೆಯನ್ನು ಒಪ್ಪಿಸುವ ಹೊರತು ಬೇರೊಂದು ಆಶಾದಾಯಕ ಉಪಾಯವಿಲ್ಲ. ಅದು ತನಗೆ ಸಾಧ್ಯವಾದಷ್ಟು ಪ್ರಾತಿನಿಧಿವಾದ ನಡುಗಾಲ ಸರಕಾರವನ್ನು ಸ್ಥಾಪಿಸಿ ಮುಸ್ಲಿಂ ಮರೂ ಸೀಖರೂ ಘಟನಾ ಸಮಿತಿಗೆ ಹಾಕಿದ ಬಹಿಷ್ಕಾರವನ್ನು ಕುರಿತು ಕೈಲಾದ ಉಪಾಯಗಳನ್ನು ಕೈಕೊಳ್ಳಲಿ" ಎಂದು ಹಿಂದುಸ್ತಾನದಲ್ಲಿ ೫ ತಿಂಗಳು ಸಂಚರಿಸಿ ಮರಳಿರುವ ಪ್ರಸಿದ್ಧ ಬ್ರಿಟಿಶ ಸಾಮ್ಯವಾದಿ ಲೇಖಕರಾದ ಎಚ್. ಎನ್ ಬ್ರೈಲ್ಸಫೋರ್ಡರು "ನ್ಯೂಸ್ಟೇಟ್ಸಮನ್ ಪತ್ರಿಕೆಯಲ್ಲಿ "ಹಿಂದುಸ್ತಾನದಲ್ಲಿ ಶಾಂತಿಯ ಆಶೆಯುಂಟೇ"? ಎಂಬ ಲೇಖದಲ್ಲಿ ಬರೆದಿದ್ದಾರೆ.

ಆ ಲೇಖದಲ್ಲಿ ಅವರು ಮತ್ತೂ ಹೇಳುವದೇನಂದರೆ:—

ನಾವು ಆಟ್ಲಿಯವರ ಘೋಷಣೆಗೆ ಬದ್ಧರಾಗಿದ್ದೇವೆ. ಯಾವ ಅಲ್ಪ ಸಂಖ್ಯಾಕ ಪಂಗಡಕ್ಕೂ-ಡೌಲಾಗಿ ತೋರುವ ಈ ಮುಸ್ಲಿಂ ಅಲ್ಪ ಸಂಖ್ಯಾಕ ಪಂಗಡಕ್ಕೆ ಕೂಡ-ಹಿಂದುಸ್ತಾನದ ಸ್ವಾತಂತ್ರ್ಯದ ಪಥದಲ್ಲಿ ಅಡಚಣಿಯೊಡ್ಡಲು ಅವಕಾಶ ಕೊಡಕೂಡದು. ಇದು ನಮ್ಮ ಮಾರ್ಗದರ್ಶಕ ತತ್ವವಾಗಿರಬೇಕು. ಆದರೆ ಸಾಮಾನ್ಯ ಪ್ರಜಾತಂತ್ರದ ನಿಯಮುಗಳಿಗನುಸರಿಸಿ ಈ ಪ್ರಸಂಗದಲ್ಲಿ ಉದಾರ ಭಾವದಿಂದ ಒಡಂಬಡಿಕೆಯಾದೀತೆಂದು ಬಗೆಯುವದು ಮರುಳುತನವಾಗಬಹುದು ಹಿಂದೂ ಮುಸ್ಲಿಂ ತಿಕ್ಕಾಟವನ್ನು ಹುಟ್ಟಿಸಿದ್ದು ಹೆಚ್ಚು ಮಟ್ಟಿಗೆ ಟೋರಿ ಧೋರಣೆ ಆದರೆ ಇಂದು ಅದು ಜಿನ್ನಾ ಸಾಹೇಬರ ಧರ್ಮಾಂಧತೆಯಿಂದ ಗಟ್ಟಿಗೊಂಡು ಕಠೋರ ವಸ್ತುಸ್ಥಿತಿಯಾಗಿ ಬಿಟ್ಟಿದೆ. ಅವರ "ಎರಡು ರಾಷ್ಟ್ರಗಳಲ್ಲಿ" ಚಿಕ್ಕದು ದೊಡ್ಡದನ್ನು ಆಳಗೊಡುವಂತಿಲ್ಲ.

ಬ್ರಿಟಿಶ ಮಂತ್ರಿಗಳೂ ವಾಯಿಸರಾಯರೂ ಒತ್ತಾಯಗೊಳಿಸಿದಷ್ಟು ಕಾಲ ಕಾಂಗ್ರೆಸ್ಸು ಸವಲತ್ತು ಕೊಡಲು ಹಿಂದೆ ಮುಂದೆ ನೋಡಿತು. ಬ್ರಿಟಿಶ ಆಳರಸರ ಒಡಕು ಹುಟ್ಟಿಸಿ ಆಳುವ ಹಳೆಯ ಆಟದ ನೆನಪು ಅದಕ್ಕೆ ಬರುತಿತ್ತು. ಆದರೆ ಎಲ್ಲ ಭಾರವನ್ನು ಅದರ ಮೇಲೆ ಹಾಕಿದರೆ ಅದು ಪ್ರಸಂಗಕ್ಕೆ ಅವಶ್ಯವಾದ ಕರ್ತೃತ್ವವನ್ನು ತೋರಿಸಬಹುದು. ಕಾಂಗ್ರೆಸ್ಸು ಮುಸ್ಲಿಮರನ್ನು ಬಂಧುಗಳೆಂದು ಪರಿಗಣಿಸುತ್ತದೆ. ಅವರ ವಿಶ್ವಾಸವನ್ನು ಗಳಿಸಿಕೊಳ್ಳುವದು ಅದರ ಮುಖ್ಯ ಕರ್ತವ್ಯ. ಅದು ಪ್ರಸಂಗ ಬಿದ್ದರೆ ಹಿಂದೀ ಸೈನ್ಯದ ಬಲದಿಂದ ವ್ಯವಸ್ಥೆ ಕಾಯ್ದುಕೊಳ್ಳಬಹುದು. ಹೊರತು ಬ್ರಿಟಿಶ ಬಂದೂಕುಗಳ ಬಲವನ್ನು ಉಪಯೋಗಿಸಹೋದರೆ ಪರಿಣಾಮವಾಗಿ ಒದಗುವ ನೈತಿಕ ಅಪಕೀರ್ತಿಯಿಂದ ಅದು ತಾನೇ ಹಾಳಾಗಿ ಹೋದೀತು. ಸಂಶಯಚಿತ್ತ ಅಲ್ಪಸಂಖ್ಯಾಕರನ್ನು ಔದಾರ್ಯದಿಂದಲೇ ಅದು ಸೆಳೆದುಕೊಳ್ಳಬೇಕು.

ಪಾಕಿಸ್ತಾನದ ತಿರುಳನ್ನು ಒಂದಲ್ಲ ಒಂದು ರೂಪದಲ್ಲಿ ಕೊಡಲೊಪ್ಪಬೇಕೆಂದು ಬ್ರೈಲ್ಸಫೋರ್ಡರ ಸೂಚನೆ. ಗುಂಪುಗಟ್ಟಿಕೊಳ್ಳುವದರಲ್ಲಿ ಕೆಲ ಬಾಧಕಗಳಿವೆಯೆಂದು ಹೇಳುತ್ತ ಅವರು ಮುಸ್ಲಿಂ ಬಹುಸಂಖ್ಯೆಯುಳ್ಳ ವಾಯುವ್ಯದ ಪ್ರಾಂತಗಳೂ ಸಂಸ್ಥಾನಗಳೂ ಒಂದೇ ಭೌಗೋಲಿಕ ಘಟಕವಾಗಿವೆಯೆಂದೂ ಅಲ್ಲಿನ ಪಂಚನದಿಗಳಿಂದ ಎಲ್ಲ ಪ್ರಾಂತಗಳೂ ಒಟ್ಟಾಗಿ ವಿದ್ಯುತ್, ನೀರಾವರಿ, ಜಲಯಾನ ಮೊದಲಾದ ಪ್ರಯೋಜನಗಳನ್ನು ಪಡೆಯಬಹುದೆಂದೂ ಈ ಬಗೆಯಾಗಿ ಗುಂಪಿನ ಯೋಜನೆಗೆ ಹೊಸ ನಿರ್ದಿಷ್ಟ ಪ್ರಯೋಜನಗಳನ್ನು ಕಾಂಗ್ರೆಸ್ಸು ಘಟನಾ ಸಮಿತಿಯಲ್ಲಿ ಕಲ್ಪಿಸಿದರೆ ಮತ್ತು ಲೀಗಿನ ಹೆಮ್ಮೆಯನ್ನು ಸಮಾಧಾನಗೊಳಿಸಲು ಅದಕ್ಕೆ ಸ್ವತಂತ್ರ ಸರಕಾರದ ರೂಪಕೊಟ್ಟರೆ ಮುಸ್ಲಿಮರು ಸಂತುಷ್ಟರಾಗಬಹುದೆಂದೂ ಆಶಿಸುತ್ತಾರೆ. ಹೀಗೆ ಲೀಗಿನ ಸಹಕಾರವನ್ನು ಸಂಪಾದಿಸಲು ಸಾಧ್ಯವಾಗಬಹುದು. ಇದಕ್ಕೆ ಪ್ರತಿಯಾಗಿ ಜಿನ್ನಾ ಸಾಹೇಬರು ಯೂನಿಯನ್ ಸರಕಾರಕ್ಕೆ ಇನ್ನೂ ಕೆಲ ಅಧಿಕಾರಗಳನ್ನು ಕಡಿಮೆಯೆಂದರೆ ಸುಂಕದ ಅಧಿಕಾರವನ್ನು ಬಿಟ್ಟುಕೊಡಬಾರರೆ?

ಕಾಂಗ್ರೆಸ ಮುಂದಾಳುಗಳು ಮುಸ್ಲಿಮರ ವಿಶ್ವಾಸವನ್ನು ಗಳಿಸಿಕೊಂಡು ವಾತಾವರಣವನ್ನೆ ಬದಲಿಸದಿದ್ದರೆ ಹಿಂದುಸ್ತಾನದಲ್ಲಿ ಯಾವ ರಾಜ್ಯಘಟನೆಯೂ ಸಾಗುವಂತಿಲ್ಲ. ಅದನ್ನು ನಿರ್ಮಿಸುವದು ಕೂಡ ಸಾಧ್ಯವಿಲ್ಲೆಂದು ಬ್ರೈಲ್ಸಫೋರ್ಡರು ಕೊನೆಯಲ್ಲಿ ಹೇಳಿದ್ದಾರೆ. ಇದಕ್ಕಾಗಿ ಮಹತ್ವಾಕಾಂಕ್ಷಿ ಮನುಷ್ಯರಾದ ಜಿನ್ನಾ ಸಾಹೇಬರಿಗೆ ಘಟನಾಸಮಿತಿಯ ಅಧ್ಯಕ್ಷತೆಯನ್ನು ಒಪ್ಪಿಸಬಹುದೆಂದು ಅವರ ಸೂಚನೆಯಿದೆ.

## ಸಂಪಾದಕೀಯ ಟೀಕೆಟಿಪ್ಪಣಿ
(೩ನೇ ಪುಟದಿಂದ ಮುಂದರಿದುದು)

ರಾಷ್ಟ್ರದ ಆಗುಹೋಗುಗಳನ್ನು ಅರಿತುಕೊಳ್ಳುವ ಸಾಮರ್ಥ್ಯವು ಅವರಲ್ಲಿರುವದಿಲ್ಲ. ಇಂತಹ ಸಂದರ್ಭದಲ್ಲಿ ಸ್ವತಃ ಧುರೀಣರಂತೆ ಆಚರಿಸುವದು ಇಲ್ಲವೆ ದೇಶದ ಪ್ರಶ್ನೆಗಳನ್ನು ಸ್ವತಃ ಬಿಡಿಸಿದವರಂತೆ ಮಾರ್ಗದರ್ಶಕರಾಗುವದು ಸಮಂಜಸವಾಗಲಾರದು. ರಾಷ್ಟ್ರದ ಸಮಸ್ಯೆಗಳನ್ನು ಶಾಂತರೀತಿಯಿಂದ ಅರಿತುಕೊಂಡು ಹೆಚ್ಚು ವಿದ್ಯಾಬುದ್ಧಿಯನ್ನು ಸಂಪಾದಿಸಿಕೊಳ್ಳುವದುತ್ತಮವೆಂದು ರಾಷ್ಟ್ರಾಧ್ಯಕ್ಷರು ಹೇಳಿದ ಉಪದೇಶವು ಹಿತೋಪದೇಶವೇ ಸರಿ. ಅದರಂತೆಯೇ ಆಚಾರ್ಯ ಕೃಪಲಾನಿಯವರು ವಿಧ್ವಂಸನ ಕಾರ್ಯಕ್ಕೂ ಮೊದಲು ವಿಧಾಯಕ ಸನ್ನಾಹ ಬೇಕೆಂದು ಹೇಳಿದ ಸೂತ್ರವು ಬಹಳ ಅರ್ಥಗರ್ಭಿತವಾಗಿದೆ. ವಿದ್ಯಾರ್ಥಿಗಳು ಇವೆರಡೂ ಹಿತೋಪದೇಶಗಳನ್ನು ಮನನಮಾಡಿಕೊಂಡು ಮುನ್ನಡೆಯಬೇಕೆಂದು ಸೂಚಿಸುತ್ತೇವೆ.

ದಂಗೆಯೆಬ್ಬಿಸಿದರೆಂದು ಆರೋಪಿಸಲ್ಪಟ್ಟು ಮರಣ ದಂಡನೆಗೆ ಗುರಿಯಾಗಿ ಜನಾಭಿಪ್ರಾಯದ ಕಾರಣದಿಂದ ಕ್ಷಮಿಸಲ್ಪಟ್ಟಿದ್ದು ಈಚೆಗೆ ಬಿಡುಗಡೆ ಹೊಂದಿದ ಕೇರಳದ ಮುಂದಾಳಾದ ಶ್ರೀ ಕೆ. ಪಿ. ಗೋಪಾಲನ್ನರು ತಾ. ೮ ಕ್ಕೆ ಮಂಗಳೂರಿಗೆ ಬಂದಿದ್ದರು. ಕೂಲಿಕಾರ ಸಂಘಗಳು ಅವರಿಗೆ ಸ್ವಾಗತವಿತ್ತವು. ಕಾಂಗ್ರೆಸ, ಲೀಗ, ಕಮ್ಯುನಿಸ್ಟ ಐಕ್ಯವನ್ನು ಪ್ರತಿಪಾದಿಸಿ ಅವರು ಕೆನರಾ ಹಾಯಸ್ಕೂಲ ಭವನದಲ್ಲಿ ಭಾಷಣ ಮಾಡಿದರು.

ಕುಂಬಳೆಯ ತಿರಿಯ ಹೊಳೆಯ ಆಳಿವೆ (ಸಮುದ್ರಸಂಗಮ) ಯಲ್ಲಿ ನೆರೆ ಬಂದು ಅನೇಕ ಮನೆಗಳೂ ಬೆಳೆಯೂ ಹಾಳಾಗಿವೆಯೆಂದು ತಿಳಿಯುತ್ತದೆ.

## ಬೆಂಗಳೂರು-ಮೈಸೂರು

ಮೈಸೂರು ರೇಲ್ವೆ ಕೂಲಿಕಾರ ಸಂಘದವರು ರೇಲ್ವೆ ವ್ಯವಸ್ಥಾಪಕರಿಗೆ ನೋಟೀಸು ಕೊಟ್ಟು ಈ ತಿಂಗಳ ೨೪ ನೇ ತಾರೀಖಿನೊಳಗೆ ತಮ್ಮ ಬೇಡಿಕೆಗಳನ್ನು ಪೂರೈಸದಿದ್ದರೆ ಸಂಪು ಹೂಡುವದಾಗಿ ತಿಳಿಸಿದ್ದಾರೆ.

ಮೈಸೂರಿನ ಹೊಸ ದಿವಾಣರು ಬೆಂಗಳೂರು-ಮೈಸೂರು ಎರಡೂ ಕಡೆ ಕಚೇರಿಗಳನ್ನು ನಡೆಸಿಕೊಂಡು ಹೋಗುವರಂತೆ.

ಮೈಸೂರು ಕಾಂಗ್ರೆಸ್ಸಿನ ಅಧ್ಯಕ್ಷರಾಗಿ ಶ್ರೀ ಕೆ. ಚಂಗಲರಾಯರೆಡ್ಡಿಯವರು ಆರಿಸಿ ಬಂದಿದ್ದಾರೆಂದು ಕಾರ್ಯ ಸಮಿತಿ ಅಧಿಕೃತವಾಗಿ ಸಾರಿದೆ. ಕಡೂರು ಜಿಲ್ಹೆಯಲ್ಲಿ ಚುನಾವಣೆಯ ಅಧಿಕಾರಿಯ ಅಸ್ವಸ್ಥತೆಯ ಮೂಲಕ ಮತದಾನವೇ ನಡೆದಿಲ್ಲಿಲ್ಲ. ಆದರೆ ಅಲ್ಲಿಯ ಮತಗಳೆಲ್ಲವೂ ಶ್ರೀ ಸಿದ್ದಲಿಂಗಯ್ಯನವರಿಗೇ ಬೀಳುತಿದ್ದವೆಂದು ಹಿಡಿದರೂ ಫಲಿತಾಂಶದಲ್ಲಿ ಹೆಚ್ಚುಕಡಿಮೆಯಾಗದಷ್ಟು ಮತಗಳು ಶ್ರೀ ರೆಡ್ಡಿಯವರಿಗೆ ಬಿದ್ದಿರುವದರಿಂದ ಶ್ರೀ ರೆಡ್ಡಿಯವರನ್ನೇ ಅಧ್ಯಕ್ಷರೆಂದು ಸಾರಲಾಗಿದೆ.

ಮೈಸೂರು ಕಾಂಗ್ರೆಸ್ಸಿನ ಮುಂದಿನ ಅಧಿವೇಶನ ಬೆಂಗಳೂರಲ್ಲಿ ಬೇಗನೆ ಜರಗತಕ್ಕದ್ದೆಂದು ಕಾರ್ಯ ಸಮಿತಿ ನಿರ್ಣಯಿಸಿ ಬೆಂಗಳೂರು ನಗರ ಕಾಂಗ್ರೆಸ ಸಮಿತಿಗೆ ವ್ಯವಸ್ಥೆಗಳನ್ನು ಕೈಕೊಳ್ಳಲು ಸೂಚಿಸಿದೆ.

ಫೆಡರಲ್ ಕೋರ್ಟಿನ ಮುಖ್ಯ ನ್ಯಾಯಾಧೀಶರಾದ ಸರ್ ಪ್ಯಾಟ್ರಿಕ ಸ್ಪೆನ್ಸರು ಬೆಂಗಳೂರಿಗೆ ಭೆಟ್ಟಿಯಿತ್ತು ಮೈಸೂರು ಹಾಯಕೋರ್ಟಿನ ಕಾರ್ಯಕಲಾಪಗಳನ್ನು ಮೈಸೂರು ಮುಖ್ಯ ನ್ಯಾಯಾಧೀಶರೊಡನೆ ಕುಳಿತು ಒಂದು ತಾಸು ನಿರೀಕ್ಷಿಸಿದರು. (ತಾ. ೧೩). ಮೈಸೂರು ಮುಖ್ಯ ನ್ಯಾಯಾಧೀಶರು ಅವರ ಗೌರವಾರ್ಥ ಸತ್ಕಾರ ಕೂಟವನ್ನು ಏರ್ಪಡಿಸಿದ್ದರು.

ಶ್ರೀ ಜೆ. ಅಪ್ಪಾಜಿಗೌಡರನ್ನು ಕಂದಾಯ ಮಂತ್ರಿಗಳಾಗಿ ಶ್ರೀ ಓ ಪುಲ್ಲಾರೆಡ್ಡಿಯವರ ಸ್ಥಾನದಲ್ಲಿ ನೇಮಿಸಲಾಗಿದೆಯೆಂದು ಸರಕಾರಿ ಪ್ರಕಟನೆ ಹೊರಟಿದೆ.

ಮೈಸೂರು ಮಹಾರಾಜರ ಆಪ್ತ ಕಾರ್ಯದರ್ಶಿ ಸರ್ ತಂಬೂಚೆಟ್ಟಿಯವರು ಈ ತಿಂಗಳ ಅಂತ್ಯದಲ್ಲಿ ನಿವೃತ್ತರಾಗುವರೆಂದು ಕೆಲ ಪತ್ರಿಕೆಗಳು ಪ್ರಕಟಿಸಿದ ಸುದ್ದಿ ಸುಳ್ಳೆಂದು ಅಧಿಕೃತವಾಗಿ ಸಾರಲ್ಪಟ್ಟಿದೆ.

ಕಡೂರು ಜಿಲ್ಹೆಯಲ್ಲಿ ಆಹಾರ ಪರಿಸ್ಥಿತಿ ಶೋಚನೀಯವಾಗಿದೆಯೆಂದು ಮೈಸೂರು ಕಾಂಗ್ರೆಸ್ ಅಧ್ಯಕ್ಷ ಶ್ರೀ ನಿಜಲಿಂಗಪ್ಪನವರು ಒಂದು ಹೇಳಿಕೆ ಹೊರಡಿಸಿದ್ದಾರೆ.

## ಮೈಸೂರಲ್ಲಿ ರಾಜಕೀಯ ಸುಧಾರಣೆ ?
### ಇಬ್ಬರು ಲೋಕನಿಯುಕ್ತ ಮಂತ್ರಿಗಳು ?

ಮೈಸೂರು ಸಂಸ್ಥಾನದಲ್ಲಿಯೂ ಬೇಗನೆ ಹೊಸ ರಾಜಕೀಯ ಸುಧಾರಣೆಗಳಾಗುವವೆಂದು ಸುದ್ದಿ ಹಬ್ಬಿದೆ. ಪ್ರಜಾಪ್ರತಿನಿಧಿ ಸಭೆಗೆ ಖಾಸಗಿ ಅಧ್ಯಕ್ಷರನ್ನು ನೇಮಿಸುವ ಏರ್ಪಾಟು ಕೈಕೊಳ್ಳಲ್ಪಡುವದೆಂದೂ ದಸರಾ ಅಧಿವೇಶನದಲ್ಲಿಯೇ ಈ ಸುಧಾರಣೆ ಬರುವದೆಂದೂ ಶ್ರೀ. ಡಿ. ಎಚ್. ಚಂದ್ರಶೇಖರಯ್ಯನವರೇ ಮೊದಲಿನ ಅಧ್ಯಕ್ಷರಾಗಿ ನೇಮಿಸಲ್ಪಡುವರೆಂದೂ ಊಹಿಸಲಾಗಿದೆ. ಇದಲ್ಲದೆ, ಪ್ರತಿನಿಧಿ ಸಭೆಗೆ ತನ್ನ ಅಧ್ಯಕ್ಷನನ್ನು ಆರಿಸಿಕೊಳ್ಳುವ ಹಾಗು ಶಾಸನ ಸಭೆಗೆ ಇಬ್ಬರು ಮಂತ್ರಿಗಳನ್ನು ಆರಿಸುವ ಹಕ್ಕನ್ನು ಕೊಡುವ ಸಲುವಾಗಿ ಈಗಿರುವ ರಾಜ್ಯಘಟನೆಯಲ್ಲಿ ಮಾಡಬೇಕಾದ ಬದಲಾವಣೆಗಳನ್ನು ಸೂಚಿಸಲು ಒಂದು ಸಮಿತಿಯನ್ನು ನೇಮಿಸುವರೆಂದು ಹೇಳಲಾಗಿದೆ.

---

ಮಂಗಳೂರಿನ ಬೆಸೆಂಟ ರಾಷ್ಟ್ರೀಯ ಬಾಲಿಕಾ ಪಾಠಶಾಲೆಯಲ್ಲಿ ತಾ. ೯ ಕ್ಕೆ ರವೀಂದ್ರ ಪುಣ್ಯ ತಿಥಿ ಶ್ರೀ ಕೆ. ಕೆ. ಶೆಟ್ಟರ ಅಧ್ಯಕ್ಷತೆಯಲ್ಲಿ ಸಾಂಗವಾಯಿತು.




## ಮುಂಬಯಿ ಶೇರ ಪೇಟೆ

ತಾ. ೧೪

ಮುಂಬಯಿ ಪೇಟೆಯಲ್ಲಿ ತೇಜಿ ವ್ಯಾಪಾರಸ್ಥರ ಕೈವಾಡದಿಂದ ಶೇರ ದರಗಳು ಒಂದೇ ಸಮನೆ ಏರುತ್ತಿವೆ. ಕೆಲ ಜನ ಬಂಡವಳಗಾರರು ಪಾಲುಗಳನ್ನು ಒಟ್ಟು ಹಾಕುವ ಹವ್ಯಾಸಕ್ಕೆ ಬಿದ್ದಿದ್ದಾರೆ. ಗಿರಣಿಗಳ ಕೆಲಸದ ತಾಸುಗಳನ್ನು ಕಡಿಮೆ ಮಾಡಿರುವುದರಿಂದ ಉತ್ಪಾದನೆಯ ವೆಚ್ಚ ಹೆಚ್ಚಾಗಿದೆ. ಆದರೆ ಅರಿವೆಯ ದರಗಳನ್ನು ಏರಿಸಲು ಸರಕಾರ ಒಪ್ಪಿಲ್ಲ. ಹೀಗಾಗಿ ಪಾಲುಗಳ ಬೆಲೆ ಇಳಿಯಬೇಕಾಗಿದ್ದರೂ ಲಕ್ಷಿಸದೆ ಬೆಲೆಗಳನ್ನು ಮೇಲೆ ತಳ್ಳುತ್ತಲೆ ನಡೆದಿದ್ದಾರೆ. ಇಂದು ಮಾತ್ರ ಜವಳಿ ಪಾಲುಗಳು ಸ್ವಲ್ಪ ಹಿಂದೆ ಸರಿದಿವೆ. ಕಳೆದ ವಾರ ವರದಿಯ ಕಾಲಕ್ಕೆ ತೋರಿದ ಇಳಿತಾಯ ಕೇವಲ ತಾತ್ಕಾಲಿಕವಾಗಿದ್ದು ಮುಂದೆ ಅವು ಏರುತ್ತಲೇ ಹೋದವು. ಟಾಟಾ ಡೆಫರ್ಡ ಪಾಲುಗಳು ೩೬೦೦-೦-೦ ರೂಪಾಯಿಯ ಅಭೂತಪೂರ್ವ ಮಟ್ಟದಲ್ಲಿ ನಿಂತಿವೆ. ಡಾಯಿಂಗ ಪಾಲುಗಳಾದರೂ ಒಂದು ವಾರದಲ್ಲಿ ನೂರು ರೂಪಾಯಿಗಿಂತಲೂ ಹೆಚ್ಚು ಗಳಿಸಿ ೩೨೪೭-೮-೦ ಕ್ಕೆ ಹೋಗಿದ್ದರೆ ಕೋಹಿನೂರು ೧೧೫೯-೦-೦ಕ್ಕೇರಿ ಇಂದು ತುಸು ಹಿಂದೇಟು ತಿಂದು ೧೧೪೮-೦-೦ಕ್ಕೆ ಬಂತು. ಸ್ವದೇಶಿ ೯೯೨-೦-೦ ೯೮೧-೦-೦ಕ್ಕೂ ಸೆಂಟ್ರಲ್ ಇಂಡಿಯಾ ೩೪-೦-೦ ರಿಂದ ೫೨೦ಕ್ಕೂ, ಗೋಕಾಕ ೫೭೧-೦-೦ ರಿಂದ ೫೩೪-೦-೦ ಕ್ಕೂ ಬಂದವು. ಅಸೋಸಿಯೇಟೆಡ್ ಸಿಮೆಂಟ್ಸ ೨೭೩-೦-೦ ರಿಂದ ೨೭೦-೮-೦ ಗೂ ಇಳಿದವು. ಟಾಟಾ ಸ್ಟೀಲ ಮತ್ತು ಡಾಯಿಂಗ್ ಪಾಲುಗಳ ಪ್ರಸ್ಥ ಮಾತ್ರ ಹಾಗೆಯೇ ಉಳಿದಿದೆ. ಬ್ಯಾಂಕ ಪಾಲುಗಳೂ ತುಸು ಹಿಂದೆ ಬಿದ್ದಿವೆ. ೩೩೦೦-೦-೦ ರಲ್ಲಿದ್ದ ಇಂಪೀರಿಯಲ್ ಎಫ್. ಸಿ. ಪಾಲು ೩೨೯೦-೦-೦ ಕ್ಕೂ ಸೆಂಟ್ರಲ್ ಬ್ಯಾಂಕು ೧೫೧ ರಿಂದ ೧೪೯-೦-೦ಕ್ಕೂ, ರಿಝರ್ವ ಬ್ಯಾಂಕ ೧೭೨ ರಿಂದ ೧೬೯-೦-೦ ಕ್ಕೂ ಇಳಿದವು.

ಸರಕಾರಿ ಸಾಲಪತ್ರಗಳಲ್ಲಿ ೩. ಪಿ. ನೋಟುಗಳು ೧೦೬-೬-೦ ರ ವರೆಗೆ ಹೋಗಿ ೧೦೬-೪-೦ ಕ್ಕೆ ಬಂದವು. ೩॥ ದರದ (೧೯೪೭-೫೦) ಸಾಲ ೧೦೨-೧೦-೦ ಯಲ್ಲಿದೆ.

### ಚಿನ್ನ--ಬೆಳ್ಳಿ

ಚಿನ್ನದ ಮೇಲಿನ ಆಯಾತ ಕರವನ್ನು ತೊಲೆಗೆ ೨೫-೦-೦ ಯಿಂದ ೧೨-೮-೦ ಗಿಳಿಸಲಾಗಿದೆ. ಬೆಳ್ಳಿಯ ಔಂಸಿಗೆ ೦-೮-೦ ಯಿಂದ ೦-೪-೦ ಗಿಳಿಸಿದೆ ಇದಲ್ಲದೆ ಚಿನ್ನವನ್ನು ದ. ಆಫ್ರಿಕೆಯಿಂದ ತರಿಸುವರೆಂಬ ಸುದ್ದಿಯೂ ಹಬ್ಬಿತು. ಹೀಗೆ ೧೦೦-೨-೦ ವರೆಗೆ ಹೋಗಿದ್ದ ತಯಾರ ಚಿನ್ನ ೯೪-೦-೦ ರೂ ಗಿಳಿಯಿತು. ವಾಯದಾ ೯೪-೧೨-೦. ಬೆಳ್ಳಿಯಾದರೂ ೧೭೦-೧೨-೦ ರಿಂದ ೧೬೧-೪-೦ ಕ್ಕಿಳಿಯಿತು. ವಾಯದಾ ೧೬೩-೪-೦.

### ಅರಳೆ

ಅರಳೆ ವಿಷಯದಲ್ಲಿ ಸರಕಾರದ ಧೋರಣೆ ಇನ್ನೂ ಹೊರಬಿದ್ದಿಲ್ಲ. ವಾಯದಾ ವ್ಯಾಪಾರಕ್ಕೆ ಅನುಮತಿ ಕೊಡಲಾಗುವದೊ ಇಲ್ಲವೊ ಗೊತ್ತಾಗಿಲ್ಲ. ಕಾರಣ ಅಮೇರಿಕೆಯಲ್ಲಿ ಅರಳೆ ದರ ಏರುತ್ತಿದ್ದರೂ ಇಲ್ಲಿ ಬಹಳ ಮಂದೀ ಪ್ರವೃತ್ತಿ ಕಾಣಬರುತಿದೆ. ಈ ವಾರ ಅರಳೆ ದರಗಳು ಇನ್ನಷ್ಟು ಇಳಿದು ಸೆಪ್ಟೆಂಬರವಾಯಿದೆ ಅರಳೆ ೪೪೨-೦-೦ ಕ್ಕೆ ಬಂದಿತು.

### ಎಣ್ಣೆ ಕಾಳು

| | |
|---|---|
| ಶೇಂಗಾ | ೧೧೯—೦—೦ |
| ಅಗಸಿ | ೨೨—೮—೦ |
| ಅಗಸಿ ಎಣ್ಣೆ | ೧೫—೪—೦ |

### ಸಾಂಗಲಿ ಪೇಟೆ

| | |
|---|---|
| ಬೆಲ್ಲ ಬಂಗಾಲಿ ಮಣ ರೂ. | ೧೪—೧೬ |
| ಅರಿಷಣ ಹೇರು | ೮೦-೮೮ |
| ಶೇಂಗಾ ಖಂಡಿ ,, | ೯೫-೯೬ |
| ಮೆಣಸಿನಕಾಯಿ ಹೇರು ,, | ೧೮೦—೧೯೦ |
| ದೇಶಿ ತಂಬಾಕು ಹೇರು | ೧೦೦-೨೦೧ |
| ತಂಬಾಕ ಪಂಢರಪುರಿ ” | ೧೫೦—೨೫೦ |
| ತಂಬಾಕು ಅಕೋಳ (ಹೇರು) | ೨೫೦—೩೭೫ |

### ಶಿವಮೊಗ್ಗೆ

ತಾ. ೧೩

| | |
|---|---|
| ಅಡಿಕೆ ದೇಶಾವರ ನಂ ೧ ಮಣ ೧ ಕ್ಕೆ | ೨೯—೩೨ |
| ,, ,, ೨ | ೨೬—೨೯ |
| ರಾಜಾ ಅಲವು | ೨೬—೩೦ |
| ಸುಲಿ | ೨೯—೩ |
| ವಂತಿ | ೧೯—೨ |
| ಬೆಟ್ಟೆ | ೧೮—೧೯ |

### ಹುಬ್ಬಳ್ಳಿ ಪೇಟೆ

| | | |
|---|---|---|
| ಜಯವಂತ ಹತ್ತಿ | ನಂ. ೧ | ೨೯೫ |
| ,, | ನಂ. ೨ | ೨೯೦ |
| ,, | ನಂ. ೩ | ೨೮೦-೨೮೫ |
| ಜಿನ | | ೨೨೦-೨೨೨ |
| ಸಾಜಿನ | | ೨೦೦-೨೦೫ |
| ಡಬಲರೋಲರ | | ೨೦೦-೨೧೦ |

## ದಕ್ಷಿಣ ಕನ್ನಡ

ದಕ್ಷಿಣ ಕನ್ನಡ ಜಿಲ್ಹೆಯಲ್ಲಿ ಗೇಣಿ ಒಕ್ಕಲುಗಳ ಹಿತರಕ್ಷಣೆಗಾಗಿ ಕಾಸರಗೋಡಿನ ಶ್ರೀ ಎಂ ಉಮೇಶರಾವ ವಕೀಲರು ಒಂದು ಮಸೂದೆಯನ್ನು ತಯಾರಿಸಿ ಯುವಜನ ಕಾಂಗ್ರೆಸ್ಸಿನ ಮೂಲಕ ಜನಾಭಿಪ್ರಾಯ ಸಂಗ್ರಹ ಮಾಡುತಿದ್ದಾರೆ. ಅನಂತರ ಅದನ್ನು ಶಾಸನ ಸಭೆಯಲ್ಲಿ ಮಂಡಿಸುವ ಪ್ರಯತ್ನ ಮಾಡಲಾಗುವದು. ೧೨ ಕಲಮುಗಳನ್ನೊಳಗೊಂಡ ಈ ಕರಡು ಮಸೂದೆಯಲ್ಲಿ ಧನಿಯಾದವನು ಹೊಲದ ಹುಟ್ಟುವಳಿಯಲ್ಲಿ ಸಮಸ್ತ ಖರ್ಚು ಹಾಗು ಒಕ್ಕಲಿನ ಸ್ವಂತ ಕೆಲಸದ ಕೂಲಿಯನ್ನು ಕಳೆದು ಉಳಿದ ನಿಕ್ಕಿ ಆದಾಯದ ಅರ್ಧವಾಸಿಗಿಂತ ಹೆಚ್ಚಿಗೆ ಗೇಣಿ ವಸೂಲು ಮಾಡಕೂಡದು; ಕೆಲವೊಂದು ಸಂದರ್ಭದಲ್ಲಿ ಅಂದರೆ ಹೊಲವನ್ನು ಒಕ್ಕಲು ಕೆಡಿಸಿದರೆ ಅಥವಾ ಧನಿಗೆ ಸ್ವತಃ ಸಾಗುವಳಿಗೆ ಹೊಲ ಬೇಕಾಗಿದ್ದರೆ ಹೊರತು ಒಕ್ಕಲನ್ನು ಹೊಲದಿಂದ ಹೊರಡಿಸಕೂಡದು ಎಂದು ಮುಂತಾಗಿ ಸೂಚಿಸಲ್ಪಟ್ಟಿದೆ.

ತಾ. ೨೯ ಜುಲೈಗೆ ಸೇರಿದ ದ. ಕನ್ನಡ ಜಿಲ್ಹಾ ಆಹಾರ ಸಮಿತಿಯ ಸಭೆಯಲ್ಲಿ ಕಲೆಕ್ಟರರು ಜಿಲ್ಹೆಯ ಆಹಾರ ಪರಿಸ್ಥಿತಿಯನ್ನು ವಿವರಿಸಿದರು. ಜುಲೈ ಬಗ್ಗೆ ಗುರುತು ಹಾಕಿದ್ದ ೨೫೭೮ ಟನ್ ಅಕ್ಕಿಯಲ್ಲಿ ೮೫೭ ಟನ್ ಮಾತ್ರ ತಾ. ೨೦ ರ ವರೆಗೆ ಬಂದು ಸೇರಿರುವದರಿಂದ ಮಂಗಳೂರು ಕಾಸರಗೋಡುಗಳಲ್ಲಿನ ಅಕ್ಕಿ ಸಂಗ್ರಹ ಮುಗಿಯುತ್ತ ಬಂದು ಪರಿಸ್ಥಿತಿ ಕೆಡುವಂತಾಗಿತ್ತು. ಅದರ ಜುಲೈಗೆ ಬರಬೇಕಾಗಿದ್ದುದರಲ್ಲಿ ೧೪೦೦ ಟನ್ ಅಕ್ಕಿ ಈಗಾಗಲೆ ಕೊಚ್ಚಿ ಬಂದರಕ್ಕೆ ಬಂದಿರುವದರಿಂದ ಮತ್ತು ಮದ್ರಾಸ ನಗರದಿಂದ ೮೧೩ ಟನ್ ಸಿಂಧೀ ಅಕ್ಕಿ ಬೇಗನೆ ಕೊಚ್ಚಿಯ ಮೂಲಕ ಬರುವದರಿಂದ ಪರಿಸ್ಥಿತಿ ಸ ಧಾರಿಸಬಹುದು. ಅಗಸ್ಟ ಬಗ್ಗೆ ೩೭೫೦ ಟನ್ ಅಕ್ಕಿ ಮಂಜೂರಾಗಿದೆ ಎಂದು ತಿಳಿಸಿದರು.

ದಕ್ಷಿಣ ಕನ್ನಡದ ಕಾಸರಗೋಡು ತಾಲೂಕಿನ ಕೆಲ ಭಾಗಗಳನ್ನು ಮಲಬಾರು ಜಿಲ್ಹೆಗೆ ಸೇರಿಸುವ ವಿಚಾರ ಮದ್ರಾಸ ಸರಕಾರದ ಮನಸ್ಸಿನಲ್ಲಿದೆಯೆಂದು ತಿಳಿಯುತ್ತದೆ. ಈ ತಾಲೂಕಿನ ಚಂದ್ರಗಿರಿ ಹೊಳೆಯ ದಕ್ಷಿಣಕ್ಕಿರುವ ಭಾಗಗಳು ಜನರ ಮಲಯಾಳಿ ಭಾಷೆ ಮಾತಾಡುತ್ತಾರೆಂದು ಪರಿಗಣಿಸಲ್ಪಟ್ಟಿದ್ದರೂ ಈ ಶುದ್ಧ ಮಲೆಯಾಳಿ ಭಾಗವಲ್ಲದ ಇನ್ನೂ ಅನೇಕ ಗ್ರಾಮಗಳನ್ನು ಮಲಬಾರಿಗೆ ಸೇರಿಸಲು ಮಲೆಯಾಳಿಗಳು ಚಳವಳಿ ಹೂಡಿರುವರು. ದ. ಕ. ಜಿಲ್ಹಾ ಕಲೆಕ್ಟರರು ಈ ತಾಲೂಕಿನ ಮಲೆಯಾಳಿ ಭಾಗಗಳನ್ನು ತೋರಿಸುವ ನಕಾಶೆಯನ್ನು ಸಿದ್ಧಗೊಳಿಸುವದರಲ್ಲಿದ್ದಾರೆಂದು ತಿಳಿಯುತ್ತದೆ. ಹೀಗಿರುವಾಗ ಮಲೆಯಾಳಿಗಳ ಆಕ್ರಮಣಶೀಲತೆ ಯಶಸ್ವಿಯಾಗದಂತೆ ನೋಡಿಕೊಳ್ಳುವದು ಕನ್ನಡಿಗರ ಕರ್ತವ್ಯ.

## ಮದ್ರಾಸ ಸರಕಾರದ ಗ್ರಾಮ ಸ್ವರಾಜ್ಯ ಯೋಜನೆ
### ಪ್ರಕಾಶಂ ಅವರ ಭಾಷಣ

ಪುನರ್ಘಟಿತ ಗ್ರಾಮ ಪಂಚಾಯತಿಗಳ ಮುಖಾಂತರ ಗ್ರಾಮಗಳ ಆಡಳಿತೆಯಲ್ಲಿ ಭಾಗವಹಿಸಲು ಗ್ರಾಮಸ್ಥರಿಗೆ ಅವಕಾಶ ಕೊಡುವದಕ್ಕಾಗಿ ಮದ್ರಾಸ ಸರಕಾರದವರು ಶಾಸನಸಭೆಯ ಮುಂದಿನ ಅಧಿವೇಶನದಲ್ಲಿ ಒಂದು ಮಸೂದೆಯನ್ನು ತರಲಿದ್ದಾರೆ. ಎಂದು ಮುಖ್ಯ ಮಂತ್ರಿ ಪ್ರಕಾಶಂ ಅವರು ಮದ್ರಾಸ ಮೇಲ್ಮನೆಯಲ್ಲಿ ಅಂದಾಜ ಪತ್ರಿಕೆಯ ಚರ್ಚೆಯನ್ನು ಮುಕ್ತಾಯಗೊಳಿಸುತ್ತ ಹೇಳಿದರು.

ಮಸೂದೆಗೆ “ಗ್ರಾಮ ಪ್ರಜಾ ರಾಜ್ಯ ಮಸೂದೆ” ಎಂದು ಹೆಸರಿಡಲಾಗುವದು. ಈ ಮಸೂದೆಯು ಈಗಿರುವ ಪಂಚಾಯತ ಬೋರ್ಡುಗಳನ್ನು ಗ್ರಾಮಸ್ಥರ ಹಿತಕ್ಕಾಗಿ ಹೆಣಗುವ ಸಾರ್ವಜನಿಕ ಸಂಸ್ಥೆಗಳನ್ನಾಗಿ ಮಾರ್ಪಡಿಸುವದು, ಎಂದೂ ತಿಳಿಸಿದರು.

ಶ್ರೀ ಪ್ರಕಾಶಂ ಅವರು ಇನ್ನೂ ಹೇಳಿದ್ದೇನಂದರೆ.

“ಕೂಲಿಕಾರ ಏಳಿಗೆಯನ್ನು ಸಾಧಿಸುವ ಹೊಸ ಮಸೂದೆಗಳನ್ನು ಮದ್ರಾಸ ಮೇಲ್ಮನೆಯ ಮುಂದಿನ ಅಧಿವೇಶನದಲ್ಲಿ ಮಂಡಿಸಲಾಗುವದು. ಔದ್ಯೋಗಿಕ ತಂಟೆ ಮಸೂದೆ, ಅಂಗಡಿ ಗುಮಾಸ್ತರ ಮಸೂದೆ, ವಾರದ ರಜೆಯ ಮಸೂದೆ, ಹೆರಿಗೆ ಸೌಕರ್ಯದ ಮಸೂದೆ ಮೊದಲಾದವುಗಳು ಇವುಗಳಲ್ಲಿ ಮುಖ್ಯವಾಗಿರುವವು.

ಉಚ್ಚಶಿಕ್ಷಣದ ಬಗ್ಗೆ ಒಂದು ಯೋಜನೆಯನ್ನು ತಯಾರಿಸಲು ಪ್ರಸಿದ್ಧ ಶಿಕ್ಷಣ ತಜ್ಞ ಹಾಗು ಪ್ರಾಂತದಲ್ಲಿರುವ ಮೂರು ವಿಶ್ವವಿದ್ಯಾಲಯಗಳ ವೈಸ ಚಾನ್ಸಲರರನ್ನೊಳಗೊಂಡು ಒಂದು ಸಮಿತಿಯನ್ನು ನೇಮಿಸಲಾಗಿದೆ.

ದೇಶೀಯ ಔಷಧಗಳ ಬಗ್ಗೆ ಕೇಂದ್ರ ಸಂಶೋಧನಾಲಯವನ್ನ ಮದ್ರಾಸದಲ್ಲಿ ತೆರೆಯಲಾಗುವದು. ಪ್ರಾಂತದಲ್ಲಿ ಐದು ಹಿಂದೀ ವೈದ್ಯಶಾಲೆಗಳನ್ನು ಸ್ಥಾಪಿಸಲಾಗುವದು. ಆಯುರ್ವೇದದಲ್ಲಿ ಪೋಸ್ಟ ಗ್ರಾಜುಯೇಟ ಶಿಕ್ಷಣವನ್ನು ಏರ್ಪಡಿಸಲಾಗುವದು.

ಮೂರು ವರ್ಷಗಳಲ್ಲಿ ಪ್ರಾಂತದಲ್ಲೆಲ್ಲ ಪಾನ ನಿರೋಧವನ್ನು ಜಾರಿಗೆ ತರಲಾಗುವದು. ಎಂಟು ಜಿಲ್ಹೆಗಳಲ್ಲಿ ಇದೇ ಅಕ್ಟೋಬರ ೧ ನೇ ತಾರೀಖಿನಿಂದ ಪಾನನಿರೋಧವು ಬಳಕೆಯಲ್ಲಿ ಬರುವದು. ಇದಕ್ಕೆ ೫.೦೮ ಕೋಟಿ ರೂ. ಗಳ ವೆಚ್ಚ ತಗಲುವದು. (ಮಾರಾಟಕರದ ಉತ್ಪನ್ನವಾದರೂ ಇಷ್ಟೆ ಇದೆ.)

ಖಾದಿ ಯೋಜನೆಗಾಗಿ ೩ ಕೋಟಿ ರೂಗಳನ್ನು ತೆಗೆದಿಡಲಾಗಿದೆಂದೂ ಇದರಿಂದ ಹಳ್ಳಿಗಳ ಸುಧಾರಣೆಯಾಗಲಿದೆಯೆಂದೂ ಶ್ರೀ ಪ್ರಕಾಶಂ ಅವರು ಹೇಳಿ ತಮ್ಮ ಭಾಷಣ ಮುಗಿಸಿದರು.

ನಂತರ ಮೇಲ್ಮನೆಯ ಅಧಿವೇಶನವು ಕೊನೆಗಂಡಿತು.

## ಮೈಸೂರಿಗೊಂದು ಪ್ರತ್ಯೇಕ ಘಟನಾ ಸಮಿತಿ ಬೇಕು

ಮೈಸೂರು ಸಂಸ್ಥಾನದ ರಾಜ್ಯಘಟನೆಯನ್ನು ರಚಿಸಲು ಸ್ವತಂತ್ರ ಘಟನಾ ಸಮಿತಿಯೊಂದನ್ನು ನೇಮಿಸಬೇಕು, ಎಂದು ಮೈಸೂರು ಪ್ರಜಾ ಪ್ರತಿನಿಧಿ ಸಭೆಯ ಸದಸ್ಯರಾದ ಶ್ರೀ. ಮುಲ್ಕ ಗೋವಿಂದ ರೆಡ್ಡಿಯವರು ಪತ್ರಿಕೆಗಳಿಗೊಂದು ಪ್ರಕಟನೆ ಕೊಟ್ಟಿದ್ದಾರೆ.

ಈ ಮೈಸೂರ ಘಟನಾ ಸಮಿತಿಯ ಸದಸ್ಯರನ್ನು ಪ್ರೌಢ ಮತದಾನ ಪದ್ಧತಿಯಿಂದ ಆರಿಸಬೇಕು. ಈ ಬೇಡಿಕೆಯು ಸಫಲವಾಗಬೇಕಾದರೆ ಸಂಸ್ಥಾನದಲ್ಲಿಯ ಪ್ರಮುಖ ರಾಜಕೀಯ ಪಕ್ಷವಾದ ಮೈಸೂರ ಕಾಂಗ್ರೆಸು ಜನರಿಗೆ ಮಾರ್ಗದರ್ಶನ ಮಾಡಬೇಕು.

ಮೈಸೂರು ಸಂಸ್ಥಾನದಲ್ಲೆಲ್ಲ ಘಟನಾ ಸಮಿತಿಯ ದಿನವೆಂದು ಒಂದು ದಿನವನ್ನು ಆಚರಿಸಿ ಹರತಾಳ ಪಾಲಿಸಬೇಕು.





--[ ವಾರದ ಕತೆ ]--

## ತಪ್ಪು ತಿಳಿವಳಿಕೆ

ಬರೆದವರು: S ವೆಂಕಟೇಶ ಹೈದರಾಬಾದ (ದ)

ಸಂಧ್ಯಾಕಾಲ ಸರಿಯಾಗಿ ಆರು ಗಂಟೆಗೆ ಮುಂಬಯಿಯ ಮೇಲ ಟ್ರೇನು ಹೈದರಾಬಾದಿಗೆ ಬಂದು ತಲುಪಿತು. ಸ್ಕೂಲ್‌ಗಳಿಗೆ ಬಿಡುವಿದ್ದ ಮೂಲಕ Zone-Tickets ಚಾಲೂ ಇದ್ದುದರಿಂದ ಉಗಿಬಂಡಿಯಲ್ಲಿ ಜನರ ಗದ್ದಲ ಅತ್ಯಧಿಕವಾಗಿದ್ದಿತು. ಒಂದೇ ಬಾಗಿಲಿನಿಂದ ಇಳಿಯುವದು- ಏರುವದು, ಹಮಾಲರ ಓಡಾಟ, ಚಹ ಮಾರುವವರ ಚೀರಾಟ, ತರುಣಿಯರ ಕಿಲಿ ಕಿಲಿ ನಗೆ ಹಾಗು ದೂರದಿಂದ ಯಾರಾದರೂ ಕೈನೂಡಿದ ಸನ್ನೆ. ಅವರು ಅಲುಗಾಡಿಸಿದ ಕರವಸ್ತ್ರ- ಅವೆಲ್ಲವೂ ನೋಡಲು ಬಹಳೇ ಮೋಜೆನಿಸುವದು. ನಿಲ್ದಾಣದ ಭವ್ಯವಾದ ಭವನವನ್ನು ನೋಡಿ ಅಪರಿಚಿತರ ಪೆಚ್ಚಿನ ಮುಖ ಅಲ್ಲಲ್ಲಿ ಕಂಗೊಳಿಸುತಿದ್ದವು. ನಿಲ್ದಾಣದ ಹೊರಬದಿಯಲ್ಲಿ ಟಾಂಗಾದವರ ಕೂಗು ಅವರ ಬಲಾತ್ಕಾರದಿಂದ ತಪ್ಪಿಸಿಕೊಂಡು ಮುಂದೆ ಸಾಗುವುದೆಂದರೆ ಅಭಿಮನ್ಯು ಚಕ್ರವ್ಯೂಹದಿಂದ ತಿರುಗಿ ಬರುವಷ್ಟು ಕಠಿನವಾಗಿರುತ್ತಿದ್ದಿತು.

ಕೈಚೀಲದೊಂದಿಗೆ ಸುರೇಶ ಬಂಡಿಯೊಳಗಿನಿಂದಿಳಿದ. ಅವನು ನಾಲ್ಕೂ ಕಡೆಗೂ ದೃಷ್ಟಿ ಹಸರಿಸಿ ತದನಂತರ ಮತ್ತೆ ಉಗಿಬಂಡಿಯ ಕಡೆಗೆ ನೋಡತೊಡಗಿದನು. ಮತ್ತೆ ಅವನು ಸ್ವಲ್ಪ ಮುಂದುವರಿದು ಯಾರನ್ನೋ ಹುಡುಕಲಾರಂಭಿಸಿದನು. ಪ್ರಭೆಯು ಅವನಿಗೆ ಎಲ್ಲಿಯೂ ಕಾಣದಾದಳು. ಸುರೇಶನಿಗೆ ದಿಕ್ಕು ತೋರದಾಯಿತು. ಒಂದುವೇಳೆ ಅವಳು ನಿಲ್ದಾಣದ ಹೊರಬದಿಗಿರಬಹುದೇಂದು ಕಲ್ಪಿಸಿ ಟಿಕೇಟನ್ನು ಇತ್ತು ಹೊರಗೆ ಬಂದನು. ಆದರೆ ಅಲ್ಲಿಯೂ ಪ್ರಭೆಯ ದರುಶನವಾಗಲಿಲ್ಲ ಸುರೇಶನಿಗೆ. ಸುರೇಶನ ಮುಖ ಕಮಲ ಬಾಡಿತು. ನಿರುಪಾಯನಾಗಿ ಚಿಂತಾಂಬುಧಿಯಲ್ಲಿ ಮುಳುಗಿ ಕಾಲು ನಡಿಗೆಯಿಂದಲೇ ಮನೆಯ ಹಾದಿ ಹಿಡಿದ. ಅಲ್ಲದೆ ಅವನಿಗೆ 'Ladies Hostel' ದಲ್ಲಿ ಸ್ವಲ್ಪ ಕೆಲಸವೂ ಇದ್ದಿದ್ದಿತು.

* * * *

Hostel ಗೇಟಿನ ಹತ್ತಿರ ಬಂದ ಕೂಡಲೇ ಅಲ್ಲಿಯ ಸಿಪಾಯಿಗೆ ವಿಚಾರಿಸಿದ. “ಮಿಸ್ ಕಮಲಾ ದೇಶಪಾಂಡೆ ಇರುವರೇನು?” “ಠಿರೋ ಸಾಹೆಬ ಅಭೀ ದೇಖುಕರ್ ಆತಾಹೂಂ” ಸಿಪಾಯಿ ಒಳಗೆ ಹೋದನು. ಅಲ್ಪಾವಧಿಯಲ್ಲಿಯೇ ಅವನು ಹೊರಗೆ ಬಂದು, “ನಹಿ, ಹೈ ಸಾಬ್, ಬಾಹೆರ್ ಗಯೀ ಹೈ” (ಇಲ್ಲ ರಾವ್‌ಸಾಹೇಬ ಅವರು ಹೊರಗೆ ತಿರುಗಾಡಲು ಹೋಗಿರುವರು).

“ಅಚ್ಛಾ! ಹಾಗಾದರೆ ಈ ಗಂಟನ್ನು ಅವರು ತಿರುಗಿ ಬಂದ ನಂತರ ಕೊಡು”

ಸುರೇಶ ಕಿಸೆಯೊಳಗಿನಿಂದ ಒಂದು ಪತ್ರವನ್ನು ತೆಗೆದು ಅದರ ಎಡಭಾಗದಲ್ಲಿ From;— S· K Kulkarni, just returned from Bombay ಹೀಗೆ ಬರೆದು ಪಾಕೀಟು ಹಾಗೂ ಗಂಟನ್ನು ಸಿಪಾಯಿಗೆ ಕೊಟ್ಟು “ಮರೆಯಬೇಡ ತಿಳಿಯಿತೇ” ಎಂದು ನುಡಿಯುತ್ತ ಮುಂದು ವರಿದನು.

\+ × × ×

ನಿನ್ನೆ ತಮ್ಮ ಸವಾರಿ ಎಲ್ಲಿಗೆ ಹೋಗಿದ್ದಿತು? ಸುರೇಶನು ಪ್ರಭೆಗೆ ಕೇಳಿದನು. “ತಾವು ಮೊನ್ನಿನ ದಿವಸ ಕೂಡಲೇ ಮುಂಬಯಿಗೆ ಹೋಗುವರೆಂಬ ಕಲ್ಪನೆ ನನಗೆ ಬಂದಿರಲಿಲ್ಲ. ನಿಮ್ಮ ಮನೆಗೆ ಹೋದ ಮೇಲೆ ಎಲ್ಲವೂ ತಿಳಿಯಿತು, ಇಂದೇ ತಿರುಗಿ ಬರುವದೆಯೂ ತಿಳಿದು ಬಂದಿತು.

“ಒಳ್ಳೆಯದು ನಾಡದು ಪುನಃ ಬಂದು ಭೆಟ್ಟಿಯಾಗುವೆ. ಜರೂರಿನ ಕೆಲಸವಿದೆ”

“ಸ್ವಲ್ಪ ತಡೆಯಿರಲ್ಲ. ಅಷ್ಟು ಅವಸರವೇಕೆ? ಚಹ ಸಿದ್ಧವಾಗಿದೆ. ತೆಗೆದುಕೊಂಡು ಹೋಗುವಿರಂತೆ” ಪ್ರಭೆಯು ಆಗ್ರಹಪಡಿಸಿದಳು.

“ಬೇಡ... Thanks....ಪುನಃ ಬಂದ ಮೇಲೆ”

“ಒಳ್ಳೇದು....Good-bye..”

× × × ×

ಎರಡು ದಿನಗಳ ನಂತರ ಸುರೇಶ ಪ್ರಭೆಯ ಮನೆಗೆ ಬರಲು, ಅವಳು ಮನೆಯಲ್ಲಿಲ್ಲದುದನ್ನು ಕಂಡು ಆಶ್ಚರಿಗೊಂಡನು. ಕಾರಣ ಇದುವರೆಗೆ ಅವಳು ಹಾಗೆ ಹೇಳದೆ ಕೇಳದೆ ಎಂದೂ ಮನೆ ಹೊರಗೆ ಕಾಲಿಡುತ್ತಿದ್ದಿಲ್ಲ. ಒಂದೊಂದು ಸಲ ಅವಳು ಅವಸರದ ಕೆಲಸದ ಮೇಲೆ ಹೋಗುವದಿದ್ದರೆ ಒಂದು ಪತ್ರಬರೆದಿಟ್ಟು ಹೋಗುತ್ತಿದ್ದಳು. ಆದರೆ ಅಂದು ಅದಾವದೂ ಇಲ್ಲ. ಖಿನ್ನ ಮನಸ್ಕನಾಗಿ ಹಿಂತಿರುಗಿದ ಸುರೇಶ.

ಮರುದಿನ ಪ್ರಭೆಯ ದರ್ಶನಕ್ಕಾತುರನಾಗಿ ಸುರೇಶ ಅವಳ ಮನೆಗೆ ಹೋದನು. ಆ ವೇಳೆಯಲ್ಲಿ ಪ್ರಭೆಯು ಯಾವದೋ ಒಂದು ಪುಸ್ತಕ ಓದುವದರಲ್ಲಿ ತಲ್ಲೀನಳಾಗಿದ್ದಳು. ‘ಏನು ನಡೆದಿದೆ? ನೀವು ಸೂರ್ಯವಂಶದವರೆಂದು ತೋರುತ್ತದೆ.’ ಅವನು ವಿನೋದ ಮಾಡಿದನು. ಆದರೆ ಪ್ರಭೆಯು ಅವನಿಗೆ ಯಾವ ಉತ್ತರ ಕೊಡಲೂ ಸಾಹಸ ಮಾಡಲಿಲ್ಲ. ಅವಳು “ಬನ್ನಿ ಕುಳಿತು ಕೊಳ್ಳಿ” ಎಂದೂ ಸ್ವಾಗತಿಸಲಿಲ್ಲ.

“ಏನು ವಿಶೇಷ ನಡೆದಿದೆ ಇಂದು?”

“ಹುಂ” ಅವಳು ಸುಮ್ಮನೆ ಹೂಗುಟ್ಟುತ್ತ ತಲೆಯಲ್ಲಾಡಿಸಿದಳು.

“ಏನದು?”

“ಆದಾರಿಗೆ ಗೊತ್ತು?” ಅವಳು ಸಿಟ್ಟಿನಿಂದ ಸುರೇಶನ ಕಡೆಗೆ ನೋಡಿದಳು.

“ನಾನೇನು ಮಾಡಿರುವೆ ಪ್ರಭೆ? ಇಷ್ಟು ಸಿಟ್ಟಗೇಳಲು?”

“ನನಗೇನು ಗೊತ್ತು?”

“ಅಂದರೆ ಇದೆಲ್ಲಿಯನ್ಯಾಯ ? ಆರೋಪಿಯ ಮೇಲಿನ ಆರೋಪವನ್ನು ಸಿದ್ಧ ಮಾಡಿ ತೋರಿಸುವ ಜವಾಬ್ದಾರಿ ಫಿರ್ಯಾದಿಯ ಮೇಲಿರುತ್ತೆ.”

“ಸುರೇಶ ನಿನ್ನಂತೆ ನಾನೇನು ವಕೀಲಳಲ್ಲ. ಅಲ್ಲದೆ ನಿಮ್ಮಂತೆ ನನಗೆ ಒಂದೇ ಮಾತನ್ನು ತಿರುವು ಮುರುವು ಮಾಡಲು ಬಾರದು. ನೀವು ವಕೀಲರು. ಮಾತ್ರ ಒಬ್ಬರ ಕೇಸನ್ನು ತೆಗೆದುಕೊಂಡು ಅದನ್ನು ಹಾಳುಮಾಡಿ ಅವರ ಹಲ್ಲು ಕಿತ್ತು ಅವರ ಕೈಯಲ್ಲಿಯೇ ಕೊಡುವದು ನಿಮಗೆ ಹೇಗೆ ಬರುತ್ತದೆಂಬುದು ನನಗೀಗ ತಿಳಿದು ಬಂದಿತು.”

“ಪ್ರಭೆ ಹೀಗೇಕೆ ಹುಚ್ಚಿಯಂತೆ ಬಡಬಡಿಸುತ್ತಿರುವೆ? ನಿನ್ನ ಮಾತಿನ ಅರ್ಥ ನನಗೊಂದೂ ತಿಳಿಯದಾಗಿದೆ.”

“ತಿಳಿಯುವುದಾದರೂ ಹೇಗೆ ಸುರೇಶ! ಬೇಕೆಂತಲೇ ಹುಚ್ಚನ ಸೋಗು ಹಾಕಿಕೊಂಡು ಮೆರೆಯಬೇಕೆಂದರೆ ಅದು ಎಲ್ಲಿಯ ವರೆಗೆ ಸಾಧ್ಯ. ಬೆಕ್ಕು ಕಣ್ಣು ಮುಚ್ಚಿಕೊಂಡು ಹಾಲು ಕುಡಿದರೆ ಜಗತ್ತು ಅದನ್ನು ನೋಡುತ್ತಿರುತ್ತದೆ.”

“ದಯಮಾಡಿ ಸ್ಪಷ್ಟವಾಗಿ ಹೇಳಿ ಬಿಡು ಪ್ರಭಾ! ಏನೆಂಬುದು ಸರಳವಾಗಿ ನುಡಿ. ನಾನೇನೂ ಸುಳ್ಳು ಹೇಳಲು ನಿಯಮಿಸಲ್ಪಟ್ಟ ಸಾಕ್ಷಿದಾರನಲ್ಲ.”

“ಆರಿಸಿದ ವಕೀಲರಂತೂ ಇದ್ದೇ ಇರುವಿರಲ್ಲ. ಒಬ್ಬರಿಗೆ ಲಗ್ನದ ವಚನವಿತ್ತು ಎರಡನೆಯವರಿಂದ.........”

“ಏನು? ಏನು ಮಾತಾಡುತ್ತಲಿರುವೆ?” ಸುರೇಶನು ಒಮ್ಮಿಂದೊಮ್ಮೆ ನುಡಿದನು.

“ನನ್ನ ಸಲುವಾಗಿ ಮುಂಬಯಿಯಿಂದ ಯಾವ ಬಹುಮಾನ ತಂದಿರುವೆ ಸುರೇಶ?”

ಅವನ ಕಡೆಗೆ ನೋಡುತ್ತ ಪ್ರಶ್ನಿಸಿದಳು ಪ್ರಭೆ.

“ಹ. ಹ. ಹ.” ಸುರೇಶ ನಗುತ್ತ ನುಡಿದ ಹೀಗೋ! ಇಷ್ಟು ಸಣ್ಣ ವಿಷಯಕ್ಕೆ ಇಂತು ದೊಡ್ಡ ಪ್ರಸ್ತಾವನೆಯೇ. ಇತ್ತೀಚೆಗೆ ಮುನ್ನುಡಿಕಾರರು ಪುಸ್ತಕಕ್ಕಿಂತ ಮುನ್ನುಡಿಯನ್ನೆ ದೊಡ್ಡದಾಗಿ ಬರೆಯುವರು. ಪಾಪ ಲೇಖಕನಿಗೆ ಮಾತ್ರ ಅಚ್ಚು ಹಾಕಿಸುವ ಖರ್ಚು ಬೀಳುವದು.

“ಸುರೇಶ ಹಾಳು ಹರಟೆಯಲ್ಲಿ ಯಾವ ತಿರುಳೂ ಇಲ್ಲ. ನೀವು ಎಷ್ಟು ಹೊಗಳಿದ್ದರೂ ಮಾತು ಮರೆಸಲು ಪ್ರಯತ್ನಿಸಿದರೂ ನಾನೇನು ನಿಮ್ಮ ಬಲೆಯಲ್ಲಿ ಬೀಳುವವಳಲ್ಲ.”

“Excuse me prabha ನಾನು ಮುಂಬಯಿಯಲ್ಲಿ ಕೇವಲ ಎರಡು ಗಂಟೆಗಳ ವರೆಗೆ ಮಾತ್ರ ಇದ್ದೆ. ಆ ವೇಳೆಯಲ್ಲಿ ತರಲು ಸಾಧ್ಯವಿದೆಯೇ?”

“ಎರಡನೆಯವರಿಗೆ Present ತರಲು ಮಾತ್ರ ಅವಕಾಶವಿದ್ದಂತೆ ತೋರುತ್ತದೆ.”

“ನಾನಾರಿಗೆ ತಂದಿರುವೆ ?”

“ಸುರೇಶ ಇಷ್ಟು ತೀವ್ರ ಮರೆತಿರೊ?”

“ಯಾರಿಗೆ? ಸುರೇಶನು ಮತ್ತೆ ಕೇಳಿದನು.

“ಕಮಲಾ ದೇಶಪಾಂಡೆಗೆ”

“ಛೇ ಛೇ ನಾನಂತೂ ಅವಳಿಗೆ ಯಾವ ವಸ್ತುವನ್ನೂ ತಂದುಕೊಟ್ಟಿಲ್ಲ. ಅಲ್ಲದೆ ಅವಳಿಗೆ Present ಯಾವ ವಿಷಯವಾಗಿ ಕೊಡಬೇಕು?”

“ಕ್ರಿಸ್‌ಮಸ್ ಭೆಟ್ಟಿಯ ಸವಿ ನೆನಪಿಗಾಗಿ ತಂದಿರಬಹುದು.”

ಕೊಂಕು ನುಡಿಯೊಂದಿಗೆ ಪ್ರಭೆಯ ತೀಕ್ಷ್ಣ ದೃಷ್ಟಿ ಸುರೇಶನ ಮುಖದ ಕಡೆಗೆ ಹರಿಯಿತು. ಆದರೆ ಸುರೇಶನ ಮುಖ ಮಾತ್ರ ಯಾವ ಭಯವೂ, ಸಂಶಯವೂ ತೋರಗೊಡದೆ ಶಾಂತವಾಗಿದ್ದಿತು ಕಿಂಚಿತ್ ಅವನ ಹುಬ್ಬುಗಳು ಮಾತ್ರ ಮೇಲೆ ಹೋಗಿದ್ದವು. ಯಾವದೋ ಒಂದು ವಿಚಾರ ತರಂಗದಲ್ಲಿ ಲೋಲನಾದಂತೆ ಅವನ ಹಾವಭಾವ ಸ್ಪಷ್ಟೀಕರಿಸಿದ್ದಿತು.

ಸುರೇಶ ಅವಡು ಕಚ್ಚಿದ.

‘ಊಂ! ಈಗಲಾದರೂ ದಯಮಾಡಿ ನನ್ನ ಮಾತು ಕೇಳುವೆಯಾ?’

‘ನೀವು ಕಮಲೆಗೆ ಒಂದು ಗಂಟನ್ನು ಕೊಟ್ಟಿರಲ್ಲವೇ?’

‘ಅಹುದು’

‘ಅದರ ಜೊತೆಯಲ್ಲಿ ಬಂದು ಮಾಡಿದ ಒಂದು ಕವ್ಹರ ಇದ್ದಿದ್ದಿತು. ಅದರ ಮೇಲೆ from S· K· Kulkarni, ಹೀಗೆ ಬರೆದಿದ್ದಿತಲ್ಲವೇ?’

‘ಅಹುದು’

‘ಒಂದಕ್ಕಿಂತಲೂ ಹೆಚ್ಚಿಗೆ ಪುರಾವೆ ಬೇಕೇನು? ನಿಮ್ಮ ಸ್ವಭಾವ ಹೀಗೆ ಚಂಚಲವಿದೆಯೆಂದು ಇದುವರೆಗೆ ತಿಳಿದುಬಂದಿರಲಿಲ್ಲ. ಸುರೇಶ ನನ್ನೊಡನೆ ಮದುವೆ ಮಾಡಿಕೊಳ್ಳುವ ವಚನವಿತ್ತು....ಪ್ರಭಾ ಸುರೇಶನ ಕಡೆಗೆ ಸಿಟ್ಟಿನಿಂದ ನೋಡತೊಡಗಿದಳು. ಒಂದು ವೇಳೆ ಸುರೇಶನು ತನ್ನ ಅಪರಾಧಕ್ಕೆ ಕ್ಷಮೆಯಾಚಿಸಿದರೆ ಕ್ಷಮಿಸಿ ಬಿಡಬೇಕೆಂದು ನಿಶ್ಚೈಸಿದಳು.

‘ಯಾರು ಹೇಳಿದರು ನಿನಗೆ ಈ ವಿಷಯ?’ ಸುರೇಶ ಕೇಳಿದ.

ಯಾರಾದರೂ ಇರಲ್ಲೊಲ್ಲರೇಕೆ? ಅವರ ಗೊಡವೆ ನಿಮ್ಮಗೇಕೆ?’

‘ಹಾಗಲ್ಲ?’

‘ಮತ್ತೇಕೆ?

‘ಛೇ! ಅದರೂ ಯಾರು ಹೇಳಿದರು ನನಗೆ ಹೆ ಳಬಾರದೇ?’

‘ಶಾರದಾ ಮೇಲೆಯೇ ವರಾಂಡಾದಲ್ಲಿ ನಿಂತಿದ್ದಳು. ನೀವು ಸಿಪಾಯಿಯ ಹತ್ತರ ಒಂದು ಪಾಕೇಟ್ ಹಾಗೂ ಒಂದು ಗಂಟನ್ನು ಕೊಟ್ಟುದುದು ನೋಡಿದಳು. ನೀವು ಹೊರಟುಹೋದ ನಂತರ ಅವರು ಕೆಳಗೆ ಬಂದು Pocket ಮೇಲಿನ ಹೆಸರನ್ನು ಓದಿದಳು. ಅದರ ಮೇಲೆ from S· K· Kulkarni Just returned from Bombay· ಹೀಗೆ ಬರೆದಿರುವುದನ್ನು ಕಂಡು ಅವಳು ಆಶ್ಚರಿಯಿಂದ ಗಂಟು ಬಿಚ್ಚಿ ನೋಡಲು ಅದರಲ್ಲಿ ಬ್ಲಾವುಜ ಇದ್ದಿತಂತೆ. ಇದಕ್ಕಿಂತಲೂ ಹೆಚ್ಚಿನ ಪುರಾವೆ ಏನು ಬೇಕು ನಿಮಗೆ! ಇಷ್ಟೇ ಪುರಾವೆಯಮೇಲೆ ತಮ್ಮಂತಹ ವಕೀಲರು ಒಬ್ಬರಿಗೆ ಫಾಸೀ ಶಿಕ್ಷೆ ಸಹ ಕೊಡಬಹುದು. ನಿಮ್ಮ ಸವಿ ನುಡಿಗಳಿಂದ ನಾನು ಮೋಸಹೋದೆ....’ ಪ್ರಭೆ ಗಟ್ಟಿಯಾಗಿ ರೋಧಿಸತೊಡಗಿದಳು.

ಸುರೇಶನು ನಗೆ ತಡೆಯಲಾರದೆ ಗಟ್ಟಿಯಾಗಿ ನಗ ತೊಡಗಿದನು.

ಪ್ರಭೆ ಒಮ್ಮಿಂದೊಮ್ಮೆ ತಣ್ಣಗಾದಳು. ಅವಳಿಗೆ ಯಾವದೂ ತೋಚಲಿಲ್ಲ.

‘ಹೀಗೋ....ನಾನು ನಿಜವಾಗಿಯೂ ಆ ಮೋಜಿನ ಕತೆ ಹೇಳಲು ಮರೆತೆ’

‘ಮೋಜು, ನಿಜವಾಗಿ ಮೋಜಿದೆ ನಿಮ್ಮ ವರ್ತನೆಯಲ್ಲಿ. ನಿಮಗೆ ಆಟವೆನಿಸಿದರೆ ನನಗೆ ಜೀವ ಹೋಗುತ್ತಲಿದೆ. ಎಂಬುದರ ಕಲ್ಪನೆಯಾದರೂ ಇದೆಯೇ ನಿಮಗೆ. ಸ್ತ್ರೀಯರ ಕೈವಾರಿಯಂತೆ.’

‘ಅದ ಕತೆ ದಯಮಾಡಿ ಕೇಳ ಬಾರದೇ?’

‘ನನಗೇನೂ ಬೇಡ...ಇದು ವರೆಗ ಕೇಳಿದುದೇ ಸಾಕು.’

“ಇದು ನೋಡು....... ಎಲ್ಲವನ್ನೂ ವಿಶದೀಕರಿಸುವೆ. ನಾನು ಯಾವ ಕೆಲಸದ ಮೇಲೆ ಮುಂಬಯಿಗೆ ಹೋಗಿದ್ದೇನೊ, ಆ ಕೆಲಸ ಅರ್ಧ ಗಂಟೆಯಲ್ಲಿಯೇ ಮುಗಿಯಿತು. ಆ ನಂತರ ಎಲ್ಲಿಗೆ ಹೋಗಬೇಕು ಎಂಬ ವಿಚಾರ ಉದ್ಭವಿಸಿತು. ನನ್ನ ಗೆಳೆಯನೋರ್ವನು ಕಾಹಿಲೆಯಿಂದ ಹಾಸಿಗೆ ಹಿಡಿದಿರುವ ವಾರ್ತೆ ನನಗೆ ತಿಳಿದಿದ್ದಿತು. ಈ ಸುಸಂಧಿಯನ್ನು ವ್ಯರ್ಥವಾಗಿ ಹೋಗಗೊಡದೆ ಅವನ ಮನೆಗೆ ಹೋದೆ. ಗೆಳೆಯನ ಹೆಂಡತಿ ಕಮಲೆಗೆ ಕೊಡಲು ಒಂದು ಬ್ಲಾಉಜನ್ನೂ ಒಂದು ಪತ್ರವನ್ನೂ ಕೊಟ್ಟಳು. ಅವರೀರ್ವರೂ ಪ್ರಾಣದ ಗೆಳತಿಯರಂತೆ. ಅದರಂತೆ ನಾನು ಟ್ರೇನಿನಿಂದ ಇಳಿದ ಕೂಡಲೇ ಹಾಗೆಯೇ ಅವಳ ಹಾಸ್ಟೆಲಿಗೆ ಹೋದೆ. ಆ ವೇಳೆಯಲ್ಲಿ ಕಮಲಾ ಇದ್ದಿರಲಿಲ್ಲ. ಉಪಾಯಗಾಣದೆ ಕವರಿನ ಮೇಲೆ ನನ್ನ ಹೆಸರು ಬರೆದು ಸಿಪಾಯಿಗೆ ಕೊಟ್ಟೆ. ನಿನಗೆ ಎಲ್ಲ ವಿಷಯವನ್ನೂ ಹೇಳಬೇಕೆಂದಿದ್ದೆ. ಆದರೆ ಕೆಲಸದ ಗಡಿಬಿಡಿಯ ಮೂಲಕ ಹೇಳಲಾಗಲಿಲ್ಲ. ಆದರೆ ನಿನ್ನ ಗೆಳತಿ ಶಾರದೆಯು ಕವರಿನ ಮೇಲಿನ ವಿಳಾಸ ಹಾಗೂ ನಾ ಬರೆದ ವಿಳಾಸ ಸ್ವಲ್ಪ ತಲೆ ಖರ್ಚು ಮಾಡಿ ಓದಿದ್ದರೆ ಹೀಗೆಲ್ಲ ತಪ್ಪು ಕಲ್ಪನೆಯಾಗುತ್ತಿರಲಿಲ್ಲ. ಪುರುಷರ ಹಾಗು ಸ್ತ್ರೀಯರ ಬರವಣಿಗೆಯಲ್ಲಿ ಬಹಳೇ ವ್ಯತ್ಯಾಸವಿರುತ್ತದೆ. ಕವ್ಹರ ಮೇಲಿನ ವಿಳಾಸ ಕಮಲೆಯ ಗೆಳತಿ ಬರೆದಿದ್ದಳು.”

“ಆದರೆ ಅವಳೂ ನಿಮ್ಮಂತೆ ವಕೀಲಳಲ್ಲ. ಅಷ್ಟು ತೀಕ್ಷ್ಣ ದೃಷ್ಟಿಯಿಂದ ನೋಡಲು” ಪ್ರಭೆ ನಗುತ್ತಾ ನುಡಿದಳು.

‘ನಿನ್ನ ತಕರಾರು ಇನ್ನೇನಾದರೂ ಇದೆಯೋ?’

‘ಅಹುದು’

“ಇನ್ನೂ” ಸುರೇಶನು ಚಕಿತನಾಗಿ ಕೇಳಿದ.

‘ಅಹುದು’ ಪ್ರಭೆ ನಗುತ್ತ ಉತ್ತರವಿತ್ತಳು. ಚಹ ತೆಗೆದುಕೊಳ್ಳದೆ ಹೋಗಕೂಡದು.

ವಾ! ಒಂದೇಕೆ ಎರಡು ಕಪ್ ತೆಗೆದುಕೊಳ್ಳುವೆ. ಮೊನ್ನಿನ ದಿವಸದ ಒಂದು ಕಪ್ಪು ಹಾಗೆಯೇ ಶಿಲ್ಲಕ ಉಳಿದಿದೆ. ನಾವು ವಕೀಲರು. ನಮಗೆ ಸಲ್ಲತಕ್ಕ ಫೀ ತೆಗೆದುಕೊಳ್ಳುವಿದಕಾರೆವು. ಪ್ರಭೆ ಆನಂದದುನ್ಮಾದದಲ್ಲಿ ಚಹ ತರಲು ಒಳಗೆ ಓಡಿದಳು.

## ಹೂವು

ಅರಳುತಿರುವ ಹೂವಿನಲ್ಲಿ
ಚೆಲುವಸುಗ್ಗಿ ತೋರುತಿಹುದು;
ಕಣ್ಗೆ ತಂಪು ಮನಕೆ ಇಂಪು
ಬಳಿಕ ಕಂಪ ಸೂಸುತಿಹುದು.

ಸೊಬಗ ಸಿರಿಯು ನಲಿಯುತಿರಲು
ಮಲೆಯ ಎಲರು ಹರಿಯುತಿರಲು,
ಶಿರವ ತೂಗಿ ಬಾಗಿ ಬಾಳು:
ಅಲ್ಲೆಯಿಂದ ಕುಣಿಯುತಿಹುದು.

ನಾಳೆ ನಿನ್ನ ತಾವದೆಲ್ಲೊ—
ಮುಡಿಯ ಮೇಲೊ ? ಗುಡಿಯ ಒಳಗೊ ?
ಅದರ ಕೊರಗು ಏತಕೀಗ—
ಎಂಬ ಮೊಗದ ಪರಿಯದೇನು !

ನಿನ್ನೆ ಏನೊ ಮುಂದೆ ಏನೊ
ಒಂದು ಚಿಂತೆ ನಿನಗೆ ಇಲ್ಲ.
ಬದುಕ ಬೆಳಗಿ ಬೆಳಕ ಬೀರಿ
ನಕ್ಕು ನಗುತ ಬಾಳುತಿರುವೆ.

ನೊಂದ ಮನಕೆ ಶಾಂತಿ ತರುವ
ಬೆಂದ ಬಾಳ್ಗೆ ತಂಪ ಸುರಿವ
ಕವಿಯ ಮನವ ಸೂರೆಗೊಂಬ
ಹಿರಿಯ ಬಲವು ನಿನ್ನೊಳಿಹುದು.

ಸೃಷ್ಟಿಯೊಡೆಯನವನ ಹಿರಿಮೆ
ಅವನ ಇರವು ಜಗಕೆ ಸಾರಿ
ಅವನ ಕಿರಣದಂಶವಾಗಿ,
ಪ್ರೇಮ ಹೊನಲ ಹರಿಸುತಿರುವೆ.

ಚೆಲುವ ಹೂವು ಚೆಲುವ ಬೀರಿ
ಚೆಲುವಿನಲ್ಲಿ ಸೇರುವಂತೆ
ಬಾಳ ಹೂವು ಚೆಲುವ ಬೀರಿ
ಚೆಲುವಿನಲ್ಲಿ ಸೇರಲಮ್ಮ.

ಅರಳುತಿರುವ ಹೂವಿನಲ್ಲಿ
ಚೆಲುವ ಸುಗ್ಗಿ ತೋರುತಿಹುದು;
ಕಣ್ಗೆ ತಂಪು ಮನಕೆ ಇಂಪು
ಬಳಿಕ ಕಂಪ ಸೂಸುತಿಹುದು.

ಕೆ. ವಿ. ರಾಜೂರ್




ಜ್ಯೋತಿಷಿ:-ಕೃಷ್ಣಶಾಸ್ತ್ರಿ ಭಡೆ, ಭವಿಷ್ಯಕಥನ ಕಾರ್ಯಾಲಯ, ಖಡೇಬಜಾರ ಬೆಳಗಾವಿ

# ಅಗಸ್ಟ ತಾ. ೧೯ ರಿಂದ ೨೫ ರ ವರೆಗೆ

## ಮೇಷ

ನಿಮ್ಮ ಮತ್ತು ನಿಮ್ಮ ಹೆಂಡತಿಯ ಪ್ರಕೃತಿಗೆ ಬಹಳ ತ್ರಾಸವಾಗಿ ಪ್ರಾಪಂಚಿಕ ಸುಖದಲ್ಲಿ ಎಲ್ಲ ಕಡೆಯಿಂದಲೂ ಬೇರೆ ಬೇರೆ ರೀತಿಯಿಂದ ಕ್ಲೇಶ ಸಂಭವಿಸುವದು. ನಗದು ಹಣದಲ್ಲಿ ಹಾನಿ. ಉದ್ಯೋಗದಲ್ಲಿ ಸಾವಕಾಶವಾದ ಪ್ರಗತಿ, ಪ್ರತಿಷ್ಠೆ ಉತ್ತಮ. ಆದರೆ ಲಾಭ ಬಹಳ ಕಡಿಮೆ. ಸಂತತಿಯಲ್ಲಿ ಒಬ್ಬನ ಏಳಿಗೆ. ಮಿತ್ರರು ವಿಪರೀತ ಹೆದರಿಕೆ ತೋರಿಸಿ ವಂಚಿಸಲು ಪ್ರಯತ್ನಿಸುವರು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಕ್ಕೂ ಅಷ್ಟೆ ಹಾನಿ. ಪ್ರವಾಸ ತ್ರಾಸದ್ದು ಆದರೆ ಭೆಟ್ಟಿ ಮತ್ತು ಪತ್ರವ್ಯವಹಾರ ಉತ್ತಮ. ಅಶ್ವಿನಿಯ ಕೊನೆಯ ಎರಡು ಮತ್ತು ಭರಣಿಯ ಮೊದಲಿನ ಎರಡು ಚರಣಗಳಿಗೆ ತ್ರಾಸ ಕಡಿಮೆ. ತಾ. ೧೯, ೨೨, ೨೩ ನೆಟ್ಟಗೆ.

ಆದರೆ ೨೩ ನೇ ತಾ. ಗೆ ಗುರು ಕನ್ಯಾರಾಶಿಯಿಂದ ತುಲಾಕ್ಕೆ ಬರುವದರಿಂದ ೭ ನೇ ಗುರು ಆಗುವನು ಇವನು ಶುಭಕಾರಿಯಾದ್ದರಿಂದ ವಾದದಲ್ಲಿ ಯಶ, ಸ್ತ್ರೀ ಸುಖ ಮತ್ತು ಭಾಗ್ಯಸುಖ ಉತ್ತಮ. ಲಾಭದಲ್ಲಿ ಹೆಚ್ಚಳ. ಮನಸ್ಸಿಗೆ ಸಮಾಧಾನಕರವಾದ ಸಂಗತಿಗಳು ಸಂಭವಿಸುವವು.

## ವೃಷಭ

ಗಂಡ ಹೆಂಡಿರಲ್ಲಿ ಒಕ್ಕಟ್ಟು ಕಡಿಮೆ. ಆದರೆ ಪ್ರಕೃತಿ ಉತ್ತಮ. ಪ್ರಾಪಂಚಿಕ ಸುಖವೆಲ್ಲ ಮನಸ್ಸಿನಂತಿದ್ದರೂ ದಾಯಾದರಲ್ಲಿ ಕ್ಲೇಶ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಉತ್ತಮ. ಆದರೆ ಗೊತ್ತಾಗದ ಕಾರಣದಿಂದಾಗಿ ಲಾಭವು ಅನಿಶ್ಚಿತವಾಗುವದು. ವಾದ ಇಲ್ಲವೆ ಸ್ಪರ್ಧೆಯಲ್ಲಿ ಅನುಕೂಲತೆ. ಆದರೆ ಶತ್ರುಗಳೊಡನೆ ಹಿಂಸೆಯ ಇಲ್ಲವೆ ಅಸಭ್ಯ ಕೃತಿ ಸಂಭವಿಸುವದು. ಗೆಳೆತನದಲ್ಲಿ ವಿರೋಧ. ಭೆಟ್ಟಿಗಿಂತ ಪ್ರವಾಸ ಮತ್ತು ಪತ್ರವ್ಯವಹಾರ ನೆಟ್ಟಗೆ. ಕೃತ್ತಿಕೆಯ ಕೊನೆಯ ಎರಡು ಮತ್ತು ರೋಹಿಣಿಯ ಮೊದಲಿನ ಎರಡು ಚರಣಗಳಿಗೆ ತ್ರಾಸ ಕಡಿಮೆ. ತಾ. ೨೨, ೨೩, ೨೪ ನೆಟ್ಟಗೆ.

೨೩ ನೇ ತಾ. ಗೆ ೬ ನೇ ಗುರು ಬರಲಿರುವದರಿಂದ ಗೆಳೆತನದಲ್ಲಿ ವಿರೋಧ, ಶತ್ರುಗಳ ಹೆಚ್ಚಳ, ಲಾಭದಲ್ಲಿ ಮಂದಿ ಮತ್ತು ಬೇಗನೆ ನಿದಾನವಾಗದ ರೋಗದ ಹೆದರಿಕೆ ಇದೆ.

## ಮಿಥುನ

ಪ್ರಕೃತಿ ಮತ್ತು ಸ್ತ್ರೀ ಸುಖ ಉತ್ತಮ. ಆದರೆ ಸಂತತಿಯ ಕಡೆಯಿಂದ ನಿರುತ್ಸಾಹದ ಕೆಲಸ ಸಂಭವಿಸುವದು. ಪ್ರಾಪಂಚಿಕ ಸುಖ ನೆಟ್ಟಗೆ ಆದರೆ ಬೇಡಾದ ಆಪ್ತರು ಬರಬಹುದು. ಸ್ಥಾವರದಲ್ಲಿ ಹೆಚ್ಚಳ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆಗಳು ಉತ್ತಮವಾದರೂ ಲಾಭ ಕಡಿಮೆ. ವಾದ ಸ್ಪರ್ಧೆಗಳಲ್ಲಿ ಒಳ್ಳೆ ಯಶಸ್ಸು ಸಾಕಷ್ಟು ಅನುಕೂಲತೆ. ಗೆಳೆತನದಲ್ಲಿ ವಿರೋಧ. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ನೆಟ್ಟಗೆ. ಆರ್ದ್ರಾದ ಕೊನೆಯ ಎರಡು ಮತ್ತು ಪುನರ್ವಸುವಿನ ಮೊದಲಿನ ಎರಡು ಚರಣಗಳಿಗೆ ತ್ರಾಸ ಹೆಚ್ಚು. ಆದರೆ ತಾ. ೧೯, ೨೪, ೨೫ ನೆಟ್ಟಗೆ.

೨೩ ನೇ ತಾ. ಗೆ ೫ ನೇ ಗುರು ಬರುವದರಿಂದ ಲಾಭ, ದೇಹ ಸುಖ, ಸ್ತ್ರೀ ಸುಖ ಮತ್ತು ಭಾಗ್ಯ ಹೆಚ್ಚುವವು. ಸಂತತಿಗೆ ಏಳ್ಗೆ. ವಾದದಲ್ಲಿ ಯಶಸ್ಸು.

## ಕರ್ಕ

ಪ್ರಕೃತಿ ಮತ್ತು ಸ್ತ್ರೀ ಸುಖ ನೆಟ್ಟಗೆ. ಪ್ರಾಪಂಚಿಕವಾದ ಇತರ ಸುಖವೂ ನೆಟ್ಟಗೆ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆಗಳು ಸಾಧಾರಣ. ಆದರೂ ಲಾಭ ಬಹಳ ನೆಟ್ಟಗೆ. ವಾದ ಸ್ಪರ್ಧೆಗಳಲ್ಲಿ ಅನುಕೂಲತೆ ಮಿತ್ರಸುಖ ನೆಟ್ಟಗೆ ಆದರೆ ಒಂದು ವಿಷಯದ ಬಗ್ಗೆ ಗೂಢ ಚಿಂತೆ ಹತ್ತುವ ಸಂಭವ. ಪ್ರವಾಸಾದಿ ಕೆಲಸಗಳು ನೆಟ್ಟಗೆ ಪುಷ್ಯಾದ ಕೊನೆಯ ಎರಡು, ಆಶ್ಲೇಷಾದ ಮೊದಲಿನ ಎರಡು ಚರಣಗಳಿಗೆ ತ್ರಾಸದಿಂದ ಯಶ. ತಾ. ೧೯, ೨೦, ೨೧ ನೆಟ್ಟಗೆ.

೨೩ ನೇ ತಾರೀಕಿಗೆ ೪ನೇ ಗುರು ಬರುತ್ತಾನೆ. ಆಪ್ತರಲ್ಲಿ ವಿರೋಧ, ಸ್ಥಾವರದಲ್ಲಿ ಹಾನಿ, ಅಂತಃಕರಣದಲ್ಲಿ ಅನೇಕ ವಿಷಯಗಳ ಚಿಂತೆ, ಪರಮಾರ್ಥ ದೃಷ್ಟಿ ಉಂಟಾಗುವವು.

## ಸಿಂಹ

ನಿಮ್ಮ ಪ್ರಕೃತಿ ಚನ್ನಾಗಿರದಿದ್ದರೂ ಹೆಂಡತಿಯ ಪ್ರಕೃತಿಗೆ ಕ್ಲೇಶ. ಪ್ರಾಪಂಚಿಕ ಸುಖದಲ್ಲಿಯೂ ಬಹಳ ತ್ರಾಸ. ಹಿಡಿದದ್ದೆಲ್ಲ ಮಣ್ಣಾಗುವದು. ಆಪ್ತರಿಂದ ಅವಮಾನ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆಗಳು ಸಾಧಾರಣವಾದರೂ ಲಾಭ ಬಹಳ ಕಡಿಮೆ. ಖರ್ಚು ಹತ್ತುಪಟ್ಟು ಹೆಚ್ಚುವದು. ವಾದ ಸ್ಪರ್ಧೆಗಳಲ್ಲಿ ಹಿನ್ನೆಟ್ಟುವಿಕೆ. ಪತ್ರವ್ಯವಹಾರಕ್ಕಿಂತ ಪ್ರವಾಸ ಮತ್ತು ಭೆಟ್ಟಿ ನೆಟ್ಟಗೆ. ಮಘಾದ ಕೊನೆಯ ಎರಡು ಮತ್ತು ಪೂರ್ವಾದ ಮೊದಲಿನ ಎರಡು ಚರಣಗಳಿಗೆ ತ್ರಾಸ ಕಡಿಮೆ. ತಾ. ೧೯, ೨೨, ೨೩ ನೆಟ್ಟಗೆ.

೨೩ ನೇ ತಾರೀಕಿಗೆ ಬರುವ ೩ ನೇ ಗುರುವು ಸ್ತ್ರೀ ಸುಖ, ಭಾಗ್ಯ ಮತ್ತು ಲಾಭಗಳನ್ನು ಹೆಚ್ಚಿಸಿ, ವಾದದಲ್ಲಿ ಯಶ ಕೊಟ್ಟು ಸಂತತಿಯ ಏಳಿಗೆಯನ್ನು ಸಾಧಿಸುವನು.

## ಕನ್ಯಾ

ಪ್ರಕೃತಿ ಮತ್ತು ಸ್ತ್ರೀಸುಖ ಉತ್ತಮವಾದರೂ ಪ್ರಾಪಂಚಿಕ ಸುಖ ಸಾಧಾರಣ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಲಾಭಗಳು ಅಷ್ಟಕ್ಕಷ್ಟೆ. ಆದರೂ ಸಂತತಿಯ ಏಳಿಗೆ. ಪ್ರತಿಯೊಂದು ಕೆಲಸದಲ್ಲಿ ಅಂದಾಜಿಗಿಂತ ಶ್ರಮ ಮತ್ತು ವೆಚ್ಚ ಹೆಚ್ಚು. ವಾದ ಸ್ಪರ್ಧೆಗಳಲ್ಲಿ ಅನುಕೂಲತೆ. ಮಿತ್ರಸುಖ ನೆಟ್ಟಗೆ ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ನೆಟ್ಟಗೆ. ಉತ್ತರಾದ ಕೊನೆಯ ಎರಡು ಮತ್ತು ಹಸ್ತಾದ ಮೊದಲಿನ ಎರಡು ಚರಣಗಳಿಗೆ ತ್ರಾಸ ಕಡಿಮೆ. ತಾ. ೨೨, ೨೩, ೨೪ ನೆಟ್ಟಗೆ.

೨೩ ನೇ ತಾರೀಕಿಗೆ ಬರುವ ಎರಡನೇ ಗುರುವು ಕೌಟುಂಬಿಕ ಸುಖ, ಮಂಗಲ ಕಾರ್ಯ, ಅಧಿಕಾರ ಹೆಚ್ಚಳ ಸ್ಥಾವರ ಸುಖಗಳಿಗೆ ಅನುಕೂಲನಾಗಿರುವನು.

## ತುಲಾ

ನಿಮ್ಮ ಹಾಗೂ ನಿಮ್ಮ ಹೆಂಡತಿಯ ಪ್ರಕೃತಿಗೆ ಕ್ಲೇಶ, ಪ್ರಾಪಂಚಿಕ ಸುಖದಲ್ಲಿಯೂ ವಿಪರೀತ ತ್ರಾಸ. ಪ್ರತಿ ಕೆಲಸದಲ್ಲಿ ಇಮ್ಮಡಿ ವೆಚ್ಚ ಮತ್ತು ಶ್ರಮವಾದರೂ ಮನಸಿನಂತೆ ಕಾರ್ಯ ನೆರವೇರುವದಿಲ್ಲವೊ ಎಂಬ ಹೆದರಿಕೆ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಲಾಭಗಳು ನೆಟ್ಟಗಿದ್ದರೂ ವೆಚ್ಚ ವಿಪರೀತವಾಗುವದರಿಂದ ಕೊರತೆ ವಹಾತ ಇದ್ದ ಕಿದ್ದಂತೆ ಉಳಿಯುವದು. ಪರಸ್ತ್ರೀಯು ಚೇಷ್ಟೆ ಮಾಡಿದ ಅಪವಾದ ಬರುವದು. ವಾದ ಸ್ಪರ್ಧೆಗಳಲ್ಲಿ ಅಪಯಶದ ಭೀತಿ ಶತ್ರುಗಳಿಂದ ನಾನಾಪ್ರಕಾರದ ನಿಂದೆ. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ನೆಟ್ಟಗೆ. ಸ್ವಾತಿಯ ಕೊನೆಯ ಎರಡು ಮತ್ತು ವಿಶಾಖಾದ ಮೊದಲಿನ ಎರಡು ಚರಣಗಳಿಗೆ ತ್ರಾಸ ಹೆಚ್ಚು ತಾ. ೨೨, ೨೩, ೨೪ ನೆಟ್ಟಗೆ.

ಈ ವಾರದಲ್ಲಿ ಬರುವ ೧ನೇ ಗುರುವು ಭಾಗ್ಯ ಸಂತತಿಯ ಏಳಿಗೆ, ಸ್ತ್ರೀಸುಖ ಮತ್ತು ಸುವಿಚಾರಗಳಿಗೆ ಅನುಕೂಲನಿದ್ದಾನೆ.

## ವೃಶ್ಚಿಕ

ಪ್ರಕೃತಿ ಮತ್ತು ರತಿಸುಖ ಉತ್ತಮ. ಇತರ ವಿಷಯಗಳಲ್ಲಿ ಗಂಡಹೆಂಡಿರಲ್ಲಿ ಮತಭೇದ. ಪ್ರಾಪಂಚಿಕ ಸುಖ ಸಾಧಾರಣ ನೆಟ್ಟಗೆ. ಉದ್ಯೋಗದಲ್ಲಿ ಪ್ರಗತಿ ಸಾಧಾರಣ ಆದರೆ ಪ್ರತಿಷ್ಠೆ ಮತ್ತು ಲಾಭ ಉತ್ತಮ ವಾದ ಸ್ಪರ್ಧೆಗಳಲ್ಲಿ ಹೆಚ್ಚು ಅನುಕೂಲತೆ. ಅಪಾರ ಸಾಹಸದ ಕೃತ್ಯ ಸಂಭವಿಸುವದು. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ನೆಟ್ಟಗೆ. ಅನುರಾಧಾದ ಕೊನೆಯ ಎರಡು ಮತ್ತು ಜ್ಯೇಷ್ಠಾದ ಮೊದಲಿನ ಎರಡು ಚರಣಗಳಿಗೆ ತ್ರಾಸದಿಂದ ಯಶಸ್ಸು. ತಾ ೨೦, ೨೧, ೨೪, ೨೫ ನೆಟ್ಟಗೆ.

ಆದರೆ ೨೩ ನೇ ತಾರೀಖಿಗೆ ಬರುವ ೧೨ ನೇ ಗುರುವು ನಿಮಗೆ ಮತ್ತು ನಿಮ್ಮ ಕುಟುಂಬದಲ್ಲಿಯ ಅನೇಕರಿಗೆ ದೈಹಿಕ ಕ್ಲೇಶವನ್ನುಂಟು ಮಾಡುವನು, ವಿಪರೀತ ಬುದ್ಧಿ ಹುಟ್ಟಿಸುವನು. ಶತ್ರುಗಳ ಹೆಚ್ಚಳ, ವೆಚ್ಚ ಬಹಳ, ಅದರಲ್ಲಿಯೂ ಸ್ವಲ್ಪ ಪುಣ್ಯ ಕೆಲಸಕ್ಕಾಗಿ ಹೀಗೆ ಸಂಭವಿಸುವದು.

## ಧನು

ನಿಮ್ಮ ಪ್ರಕೃತಿ ನೆಟ್ಟಗೆ ಆದರೆ ನಿಮ್ಮ ಹೆಂಡತಿಯದು ಕೆಡುವದು. ಸಂತತಿಯ ನಡೆವಳಿಗೆ ಮನಸ್ಸಿಗೆ ಬರುವದಿಲ್ಲ ಆದರೆ ಇತರ ಪ್ರಾಪಂಚಿಕ ಸುಖ ಉತ್ತಮ ಪ್ರತಿ ವಿಷಯದಲ್ಲಿಯೂ ಪ್ರಗತಿ. ಉದ್ಯೋಗದಲ್ಲಿ ಒಳ್ಳೆ ಹೆಚ್ಚಳ, ಬೇಕಾದಷ್ಟು ದ್ರವ್ಯ ಲಾಭ, ಪ್ರತಿಷ್ಠೆ ಬಹಳ. ಆದರೆ ಕೈಕೆಳಗಿನವರು ಅನಾದರದ ಸಂಗತಿಯೊಂದನ್ನಾದರೂ ಮಾಡುವರು ವಾದ ಸ್ಪರ್ಧೆಗಳಲ್ಲಿ ಬಹಳ ಅನುಕೂಲ ಮಿತ್ರ ಸುಖ ನೆಟ್ಟಗೆ. ವಿರಕ್ತರ ಸಹವಾಸ ಪತ್ರವ್ಯವಹಾರಕ್ಕಿಂತ ಪ್ರವಾಸ ಭೆಟ್ಟಿ ನೆಟ್ಟಗೆ. ಮೂಲಾದ ಕೊನೆಯ ಎರಡು ಪೂರ್ವಾಷಾಢಾದ ಮೊದಲಿನ ಎರಡು ಚರಣಗಳಿಗೆ ತ್ರಾಸ ಕಡಿಮೆ. ತಾ. ೧೯, ೨೨, ೨೩ ನೆಟ್ಟಗೆ.

೨೩ ನೇ ತಾ. ಗೆ ಬರುವ ೧೧ ನೇ ಗುರುವು ಮನಸೋಕ್ತ ಧನಲಾಭ, ಇಚ್ಛಿತ ಯಶ, ಪುತ್ರೋತ್ಕರ್ಷ, ವಾದದಲ್ಲಿ ಯಶ ಆದರೆ ಮಾತೃಕ್ಲೇಶ ಸ್ಥಾವರದಲ್ಲಿ ಸ್ವಲ್ಪ ಹಾನಿ ಹೀಗೆ ಫಲ ಕೊಡುವನು.

## ಮಕರ

ಪ್ರಕೃತಿ ಮತ್ತು ಸ್ತ್ರೀ ಸುಖ ಉತ್ತಮ. ಇತರ ಪ್ರಾಪಂಚಿಕ ವಿಷಯಗಳಲ್ಲಿ ಬಹಳ ತ್ರಾಸ. ಸಂತತಿಯ ಕಡೆಯಿಂದ ಹೊಣೆಗಾರಿಕೆಯನ್ನರಿಯದ ಕಾರ್ಯ ಸಂಭವಿಸುವದು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಲಾಭಗಳು ಉತ್ತಮ. ಆದರೆ ಕೆಲವರೊಡನೆ ನಿಷ್ಕಾರಣವಾಗಿ ವೈಮನಸ್ಸು. ವಾದ ಸ್ಪರ್ಧೆಗಳಲ್ಲಿ ಬಹಳ ಅನುಕೂಲತೆ ಮಿತ್ರ ಸುಖ ಉತ್ತಮ. ಪ್ರವಾಸಾದಿ ಕೆಲಸಗಳು ಹಿತಕರ, ಉತ್ತರಾಷಾಢಾದ ಕೊನೆಯ ಎರಡು, ಶ್ರವಣಾದ ಮೊದಲಿನ ಎರಡು ಚರಣಗಳಿಗೆ ತ್ರಾಸ ಕಡಿಮೆ. ತಾ. ೨೦, ೨೧, ೨೪, ೨೫ ನೆಟ್ಟಗೆ.

ಈ ರಾಶಿಗೆ ೨೩ ನೇ ತಾ. ಗೆ ಬರಲಿರುವ ೧೦ ನೇ ಗುರುವು ಪ್ರಾಪಂಚಿಕ ಸುಖ, ಸ್ಥಾವರ ಸಂಗ್ರಹ ಮತ್ತು ಪ್ರತಿಷ್ಠೆಗಳನ್ನು ಹೆಚ್ಚಿಸುವನಾದರೂ ದಾಯಾದರಿಗೆ ಕ್ಲೇಶ, ಶತ್ರುಗಳ ಹೆಚ್ಚಳ ಹಾಗೂ ಚರ್ಮರೋಗದಿಂದ ತ್ರಾಸ ಕೊಡುವನು.

## ಕುಂಭ

ಪ್ರಕೃತಿ ಸಾಧಾರಣ. ಆದರೆ ಹೆಂಡತಿಯೊಡನೆ ಆಗಾಗ ಮತಭೇದ. ಸಂತತಿಯಿಂದ ಉದ್ವೇಗದ ಕೆಲಸಗಳು ಉದ್ಯೋಗದಲ್ಲಿ ಪ್ರಗತಿ ಬಹಳ ಕಡಿಮೆ. ಆದರೆ ಪ್ರತಿಷ್ಠೆ ಲಾಭಗಳು ಸಾಧಾರಣ ಪ್ರವಾಸವು ಬಹಳ ಕಡಿಮೆ, ಪತ್ರವ್ಯವಹಾರವು ಮನಸು ಸೋಯಿಸುವಂಥದು. ಆದರೆ ಭೆಟ್ಟಿ ನೆಟ್ಟಗೆ. ಶತತಾರಿಕೆಯ ಕೊನೆಯ ಎರಡು ಮತ್ತು ಪೂರ್ವಾಭಾದ್ರಪದದ ಮೊದಲಿನ ಎರಡು ಚರಣಗಳಿಗೆ ಹೆಚ್ಚು ತ್ರಾಸ. ತಾ. ೧೯, ೨೨, ೨೩, ನೆಟ್ಟಗೆ.

೨೩ ನೇ ತಾ. ಗೆ ಬರುವ ೯ ನೇ ಗುರುವು ಭಾಗ್ಯ, ಲಾಭ, ದೇಹ ಸುಖ ಹಾಗೂ ಸಂತತಿಯ ಏಳಿಗೆಗಾಗಿ ಉತ್ತಮನಾಗಿದ್ದಾನೆ.

## ಮೀನ

ನಿಮ್ಮ ಪ್ರಕೃತಿ ಸಾಧಾರಣ ಆದರೆ ಹೆಂಡತಿಯುದು ಉತ್ತಮ. ಇತರ ಪ್ರಾಪಂಚಿಕ ಸುಖ ನೆಟ್ಟಗೆ ಉದ್ಯೋಗದಲ್ಲಿ ಪ್ರಗತಿ, ಪ್ರತಿಷ್ಠೆ ಲಾಭಗಳು ಬಹಳ ಉತ್ತಮ. ಮಿತ್ರಸುಖ ನೆಟ್ಟಗೆ. ಪ್ರತಿಕಾರ್ಯದಲ್ಲಿಯೂ ಸ್ವಲ್ಪ ಶ್ರಮದಿಂದ ಯಶಸ್ಸು. ವಾದ ಸ್ಪರ್ಧೆಗಳಲ್ಲಿ ಉತ್ತಮ ಯಶಸ್ಸು ಪ್ರವಾಸಾದಿ ಕೆಲಸಗಳು ಹಿತಕರ. ಉತ್ತರಾಭಾದ್ರಪದದ ಕೊನೆಯ ಎರಡು ರೇವತಿಯ ಮೊದಲಿನ ಎರಡು ಚರಣಗಳಿಗೆ ತ್ರಾಸದಿಂದ ಯಶಸ್ಸು. ತಾ. ೧೯, ೨೦, ೨೪, ೨೫ ನೆಟ್ಟಗೆ.

೨೩ ನೇ ತಾರೀಕಿಗೆ ಬರುವ ೮ ನೇ ಗುರುವು ಪ್ರಕೃತಿಗೆ ಕ್ಲೇಶ, ಅಪ್ರತಿಷ್ಠೆ, ನಿರರ್ಥಕ ವೆಚ್ಚ ಮಾಡಬಹುದಾದರೆ ಸ್ಥಾವರ ಜಂಗಮದಲ್ಲಿ ಹೆಚ್ಚಳ, ಕೌಟುಂಬಿಕ ಉತ್ಕರ್ಷದ ಒಂದೆರಡು ಸಂಗತಿಗಳನ್ನು ಮಾಡಬಹುದು.

## ಪುಸ್ತಕ ಮತ್ತು ವಿಮರ್ಶೆ

(೨ನೇ ಪುಟದಿಂದ)

ಜೀವನಿಯನ್ನು ಪಕ್ಷದ ಧೋರಣೆಗಳ ಪ್ರತಿಪಾದನೆಗಾಗಿ ಉಪಯೋಗಿಸಿಕೊಂಡಿದ್ದಾರೆ. ಭಗತಸಿಂಗರದಷ್ಟೇ ಅಲ್ಲದೆ ಅವರ ಬೇರೆ ಸಹಯೋಗಿಗಳನೇಕರ ವ್ಯಕ್ತಿ ಪರಿಚಯ ಇದರಲ್ಲಿದೆ. ಒಟ್ಟಿನ ಮೇಲೆ ಈ ಪುಸ್ತಕ ಎರಡು ದಶಕಗಳ ಹಿಂದೆ ಕ್ರಾಂತಿಕಾರಿ ಯುವಕರನ್ನು ಸ್ಫೂರ್ತಿಗೊಳಿಸಿದ ದಿಟ್ಟತನದ ಧ್ಯೇಯ, ಪರಮಾವಧಿ ತ್ಯಾಗ ಸಿದ್ಧತೆ ಮೊದಲಾದ ಆದರ್ಶಗಳನ್ನು ಅರಿತುಕೊಳ್ಳಲು ಸಹಕಾರಿಯಾಗಿದೆ.

### 1857
### The Great Rebellion :

By Asoka Mehta Publishers: Hind Kitabs Ltd, 267 Hornby Road, Bombay 81 pp Re. 1/8

೧೮೫೭ ನೇ ಇಸವಿ ಹಿಂದುಸ್ತಾನದಲ್ಲಿ ರಕ್ತಾಕ್ಷರಗಳಲ್ಲಿ ಬರೆಯಲ್ಪಟ್ಟಿದೆ. ವಿದೇಶೀಯರ ಚಂಚು ಪ್ರವೇಶದ ಗಂಡಾಂತರಮಯ ಸ್ವರೂಪವನ್ನು ಮನಗಂಡ ಹಿಂದೀಯರು ಅವರನ್ನು ಹೊರಗಟ್ಟಲು ಶಸ್ತ್ರಧಾರಣೆ ಮಾಡಿದ ವರ್ಷವದು. "ಶಿಪಾಯಿಗಳ ಬಂಡು" ಎಂದು ಬ್ರಿಟಿಶ ಇತಿಹಾಸಕಾರರು ಕರುಬಿನಿಂದ ಕರೆದ ಈ ಯುದ್ಧದ ನಿಜವಾದ ಕ್ರಾಂತಿಕಾರಿ, ರಾಷ್ಟ್ರೀಯ ಸ್ವರೂಪವನ್ನು ಶ್ರೀ. ಮೆಹತಾರು ಇಲ್ಲಿ ಬಿಚ್ಚಿ ತೋರಿಸಿದ್ದಾರೆ ಇಂದಿಗೂ ಹೆಸರು ಹೇಳಿದೊಡನೆ ಹಿಂದೀಯರ ಧಮನಿಗಳಲ್ಲಿ ರಕ್ತವನ್ನು ಕುದಿಸುವ "ಸಿಪಾಯಿಗಳ ಬಂಡು" ಬಂಡಾಗಿದ್ದಿಲ್ಲ. ಬದಲಿಗೆ ಸ್ವಾತಂತ್ರ್ಯ ಯುದ್ಧವಾಗಿತ್ತು. ಅದನ್ನು ಹೂಡಿದವರು ಕಾಲಗತಿಯಿಂದ ಮತ್ತು ತಮ್ಮ ಕೈಮೀರಿದ ಗತ್ತುಗಾರಿಕೆಯ ಕಾರಣಗಳಿಂದ ಸೋತು ಹೋದರೆಂದು ಮಾತ್ರ ಅದಿಂದ "ಬಂಡೆಂ"ದು ಕರೆಸಿಕೊಳ್ಳುತಿದೆ. ಅನುಪಮ ಬಲಿದಾನ ತ್ಯಾಗಗಳಿಂದೊಡಗೂಡಿದ ಈ ಹೋರಾಟದ ಅನೇಕ ವಿವರಗಳನ್ನೊಳಗೊಂಡ ಈ ಪುಸ್ತಕದಲ್ಲಿ ಆ ಕಾಲದಲ್ಲಿ ಹಿಂದೂ-ಮುಸ್ಲಿಂ ಐಕ್ಯ ಎಷ್ಟು ಬಲವಾಗಿತ್ತು, ಸೋತನಂತರ ಎರಡೂ ಜಾತಿಯವರನ್ನು ಯಾವ ಅಮಾನುಷ ರೀತಿಯಿಂದ ಬಿಳಿಯರು ನಡೆಸಿಕೊಂಡರು, ಎಂಬುದರ ಬಗೆಗೆ ಚಿತ್ರವತ್ತಾದ ವರ್ಣನೆಯಿದೆ. ಹೀಗಿದ್ದರೂ ಈ ಸಂದರ್ಭದಲ್ಲಿ ಸಾಧ್ಯವಿರುವಷ್ಟು ನಿಷ್ಪಕ್ಷಪಾತದಿಂದ ಹಿಂದೀ ಇತಿಹಾಸದ ಈ ಪುಟವನ್ನು ಬರೆಯಲಾಗಿದೆ. ಅದು ಏಕೆ ವಿಫಲವಾಯಿತು, ಅದರ ಸಾಮಾಜಿಕ ಸ್ವರೂಪವೆಂತಿತ್ತು, ಎಂಬ ಬಗ್ಗೆ ಮೆಹತಾರು ತಮ್ಮ ಪೃಥಕ್ಕರಣವನ್ನು ಕೊಟ್ಟಿದ್ದಾರೆ. ಅವಶ್ಯವಾಗಿ ಓದಲೇ ಬೇಕಾದ ಪುಸ್ತಕವಿದು.



ಅಂಚೆಯಿಂದ ತರಿಸಿಕೊಳ್ಳುವ ನಮ್ಮ

## ಚಂದಾದಾರರಲ್ಲಿ ವಿನಂತಿ

ಪತ್ರವ್ಯವಹಾರ ಮಾಡುವಾಗ್ಗೆ ಮತ್ತು ಮನಿಆರ್ಡರ ಕಳಿಸುವಾಗ್ಗೆ ನಿಮಗೆ ಬರುತ್ತಿದ್ದ ಪತ್ರಿಕೆಯ ಮೇಲಿನ ವಿಳಾಸದಲ್ಲಿ ನಾವು ಸೇರಿಸಿದ ನಂಬರ ಬರೆಯಬೇಕು. ನಂಬರ ಇಲ್ಲದ ಪತ್ರಕ್ಕೆ ಉತ್ತರ ಸಿಗಲಾರದು.

ಅವಧಿ ಮುಗಿಯುವ ೧೫ ದಿನ ಮುಂಚೆಯೆ ನಾವು ನಮ್ಮ ಪದ್ಧತಿಯಂತೆ ವ್ಹಿ. ಪಿ. ಮಾಡುವೆವು. ಬೇಡಾದವರು ಮೊದಲೇ ನಮಗೆ ತಿಳಿಸಬೇಕು.

ತಿಂಗಳು, ಎರಡು ತಿಂಗಳು ಚಂದಾದಾರರಾಗಲಿಚ್ಛಿಸುವವರು ಮುಂಗಡ ಹಣ ಕಳಿಸಬೇಕು. ಅವರಿಗೆ ವ್ಹಿ. ಪಿ. ಯನ್ನು ಕಳಿಸಲಾಗುವದಿಲ್ಲ. ವಾರಪತ್ರಿಕೆ (ಕರ್ಮವೀರ) ಯನ್ನು ೬ ತಿಂಗಳಿಗಿಂತ ಕಡಿಮೆ ವ್ಹಿ. ಪಿ. ಮಾಡುವದಿಲ್ಲ. ಮೊದಲನ ವ್ಹಿ. ಪಿ. ಕಳಿಸಿದ ಪ್ರತಿಯನ್ನು ನಾವು ಲೆಕ್ಕಕ್ಕೆ ಹಿಡಿಯದೆ ನಿಮ್ಮಿಂದ ವ್ಹಿ. ಪಿ. ಹಣ ಬಂದು ನಮ್ಮ ಕೈಸೇರಿದ ನಂತರ ಪತ್ರಿಕೆಯನ್ನು ಕಳಿಸಲು ಪ್ರಾರಂಭಿಸಿ ಅಂದಿನಿಂದಲೆ ನಿಮ್ಮ ಅವಧಿಯನ್ನು ಗಣಿಸಲಾಗುವದು.

—ವ್ಯವಸ್ಥಾಪಕ

**ಕರ್ಮವೀರ, ಹುಬ್ಬಳ್ಳಿ**

ಈ ಪತ್ರಿಕೆಯು ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ ರಾಷ್ಟ್ರೀಯ ವಾಙ್ಮಯ ಪ್ರಕಾಶನ ಟ್ರಸ್ಟಿನ ಪರವಾಗಿ ಹ. ರಾ. ಮೋಹರೆಯವರಿಂದ ಮುದ್ರಿತ ಪ್ರಕಟವಾಯಿತು